# ಕುಮಾರವ್ಯಾಸನ ಸ್ತ್ರೀ ಪಾತ್ರಗಳು: ಸ್ತ್ರೀವಾದಿ ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ಪ್ರಬಂಧ

ಸಂಶೋಧಕರು

ಹೇಮಾವತಿ.ಸಿ.ಐಚ್

ಮಾರ್ಗದರ್ಶಕರು

ಡಾ. ಎಚ್. ಎಸ್. ರಾಘವೇಂದ್ರರಾವ್

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ

ಹಂಪಿ-೫೮೩೨೧೧



೧೯೯೩-೯೪

54

# ಕುಮಾರವ್ಯಾಸನ ಸ್ತ್ರೀ ಪಾತ್ರಗಳು : ಸ್ತ್ರೀವಾದಿ ಅಧ್ಯಯನ


<u>ಸಂಶೋಧಕರು</u>

ಹೇಮಾವತಿ ಸಿ.ಎಚ್.





<u>ಮಾರ್ಗದರ್ಶಕರು</u>

ಎಚ್.ಎಸ್. ರಾಘವೇಂದ್ರರಾವ್


ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ನಿಬಂಧ

1993—94





## :: ಪ್ರಮಾಣ ಪತ್ರ ::

"ಕುಮಾರವ್ಯಾಸನ ಸ್ತ್ರೀ ಪಾತ್ರಗಳು: ಸ್ತ್ರೀವಾದಿ ಅಧ್ಯಯನ" ಎಂಬ ಶೀರ್ಷಿಕೆಯ ಈ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ಎಚ್.ಎಸ್.ರಾಘವೇಂದ್ರರಾವ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪ ಸಲಾಗಿದೆ. ಈ ಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಬಿಡಿ ಭಾಗವನ್ನು ಈ ಮೊದಲು ಬೇರಾವುದೇ ಪದವಿಗಾಗಲೀ ಇತರ ಉದ್ದೇಶಕ್ಕಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಸ್ಪಷ್ಟಪಡಿಸುತ್ತಿದ್ದೇನೆ.

Hegl

(ಹೇಮಾವತಿ ಸಿ.ಎಚ್.)
ಎಂ.ಫಿಲ್.ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ
ಹಂಪಿ-583211.

:: ಅರ್ಹತಾ ಪತ್ರ ::

ಹೇಮಾವತಿ ಸಿ.ಎಚ್. ಅವರು '' ಕುಮಾರವ್ಯಾಸನ ಸ್ತ್ರೀ ಪಾತ್ರಗಳು: ಸ್ತ್ರೀವಾದಿ ಅಧ್ಯಯನ'' ಎಂಬ ಈ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಬಂಧದ ವಿಷಯವನ್ನು ಅಥವಾ ಇದಕ್ಕೆ ಸಂಬಂಧಿಸಿದ ಯಾವುದೇ ವಿಭಾಗಗಳನ್ನು ಯಾವುದೇ ಪದವಿಗಾಗಿ ಅಥವಾ ಇತರ ಯಾವುದೇ ಉದ್ದೇಶಕ್ಕಾಗಿ ಬಳಸಿಕೊಂಡಿರುವುದಿಲ್ಲ.

ಸ್ಥಳ: ಹಂಪಿ.

ದಿನಾಂಕ: ೪.೪.೧೯೯೪

(ಎಚ್.ಎಸ್.ರಾಘವೇಂದ್ರರಾವ್)

ಕನ್ನಡ ವಿಶ್ವವಿದ್ಯಾಲಯ
ಹಂಪಿ.

## :: ಕೃತಜ್ಞತೆಗಳು ::

ಮಾರ್ಗದರ್ಶಕರಾಗಿ ಸಲಹೆ, ಸಹಕಾರಗಳನ್ನಿತ್ತ ಎಚ್.ಎಸ್.ರಾಘವೇಂದ್ರ ರಾವ್ ಅವರಿಗೆ, ಅಧ್ಯಯನದ ಅವಧಿಯಲ್ಲಿ ಸಹಕರಿಸಿದ ಕೆ.ವಿ.ನಾರಾಯಣರಿಗೆ, ಅಳುಕನ್ನು ಪರಿಹರಿಸಿ ಧೈರ್ಯ ತುಂಬಿದ ಜಿ.ಆರ್. ರಾಮಮೂರ್ತಿಯವರಿಗೆ, ಗೆಳೆಯ ಅಶೋಕ ಕುಮಾರ ರಂಜೇರೆ ಮೊದಲಾದವರಿಗೆ, ಎಂ.ಫಿಲ್, ವ್ಯಾಸಂಗಕ್ಕೆ ಪ್ರೋತ್ಸಾಹಿಸಿ ಉತ್ತೇಜಿಸಿದ ಪುರುಷೋತ್ತಮ ಬಿಳಿಮಲೆಯವರಿಗೆ, ಚರ್ಚೆಗೆ ಸಲಹೆ ಸೂಚನೆಗಳನ್ನು ನೀಡಿದ ಶ್ರೀಮತಿಯವರಿಗೆ, ಪ್ರಬಂಧದ ತಯಾರಿಯಲ್ಲಿ ಚರ್ಚಿಸಿ, ಸಹಕರಿಸಿದ ಪತಿ ಬಲಪತಿಗೆ, ಹೃತ್ಪೂರ್ವಕ ಕೃತಜ್ಞತೆಗಳು.

(ಹೇಮಾವತಿ. ಸಿ.ಎಚ್.)
ಎಂ.ಫಿಲ್.ವಿದ್ಯಾರ್ಥಿ.

:: ಪರಿವಿಡಿ ::

# ಅಧ್ಯಯನದ ಹಿನ್ನೆಲೆ ಮತ್ತು ಸ್ವರೂಪ

## ಅಧ್ಯಯನದ ಹಿನ್ನೆಲೆ ಮತ್ತು ಸ್ವರೂಪ

ಕನ್ನಡದಲ್ಲಿ ಪಂಪನಿಂದ ಪ್ರಾರಂಭಿಸಿ ಎ.ಆರ್.ಕೃಷ್ಣಶಾಸ್ತ್ರಿಗಳ ತನಕ ಮಹಾಭಾರತವನ್ನು ಕನ್ನಡಿಸಿದವರು ಅನೇಕರು. ಆದರೆ ಇವುಗಳಲ್ಲಿ ಪಂಪನ –'ವಿಕ್ರಮಾರ್ಜುನ ವಿಜಯ' ರನ್ನನ 'ಸಾಹಸ ಭೀಮ ವಿಜಯ', ಕುಮಾರವ್ಯಾಸನ –'ಕರ್ಣಾಟ ಭಾರತ ಕಥಾಮಂಜರಿ' ಲಕ್ಷ್ಮೀಶನ 'ಜೈಮಿನಿ ಭಾರತ'. ಈ ನಾಲ್ಕು ಕೃತಿಗಳು ವಿಭಿನ್ನ ಕಾಲಗಳಲ್ಲಿ ರಚಿತವಾಗಿರುವ ಕನ್ನಡದ ಸ್ವತಂತ್ರ ಭಾರತಗಳಾಗಿವೆ. ಪಂಪ ಅರ್ಜುನನನ್ನು(ಅರಿಕೇಸರಿಯನ್ನು) ನಾಯಕನನ್ನಾಗಿ ಮಾಡಿಕೊಂಡಗಲೇ ಹಲವು ಬದಲಾವಣೆಗಳನ್ನು ಮಾಡಿಕೊಂಡಿರುವುದನ್ನು, ರನ್ನ ಸಹ ಭೀಮ(ಇರಿವ ಬೆಡಂಗ)ನನ್ನು ನಾಯಕನನ್ನಾಗಿ ಮಾಡಿಕೊಳ್ಳುವಲ್ಲಿ ಅನುಸರಿಸಿದ್ದಾನೆ. ನಂತರದಲ್ಲಿ ಮಹಾಭಾರತವನ್ನು ಷಟ್ಪದಿಯ ರೂಪದಲ್ಲಿ ಕನ್ನಡದಲ್ಲಿ ರಚಿಸುವ ಸವಾಲನ್ನು ಸ್ವೀಕರಿಸಿದ್ದು ಕುಮಾರವ್ಯಾಸನೇ. 10, 11ನೇ ಶತಮಾನದ ಕರ್ನಾಟಕ ರಾಜಕೀಯ, ಸಾಮಾಜಿಕ ಚರಿತ್ರೆಯನ್ನು ಪಂಪನ ಕಾವ್ಯಗಳ ಮೂಲಕ ಅಧ್ಯಯನ ಮಾಡಲು ಸಾಧ್ಯವಾದರೆ, 15ನೇ ಶತಮಾನದ ರಾಜಕೀಯ ಸಾಮಾಜಿಕ ಪ್ರವೃತ್ತಿಗಳನ್ನು ಕುಮಾರವ್ಯಾಸನ ಭಾರತ ದಾಖಲಿಸಿರುವುದನ್ನು ಗಮನಿಸುತ್ತೇವೆ.

ಕರ್ನಾಟಕ ಚರಿತ್ರೆಯಲ್ಲಿ ಪ್ರಭುತ್ವವೇ ಮುಖ್ಯವಾಗಿ, ಆಗಾಗಿ ಬಾಳಿದ ಸಾಮಾನ್ಯ ಮನುಷ್ಯರ ಬದುಕು ಮುಖ್ಯವಾಗದ ಸ್ಥಿತಿಯನ್ನು ಕುಮಾರವ್ಯಾಸ ಭಾರತವು ಹೇಳುತ್ತದೆ. 11, 12ನೆ ಶತಮಾನದಲ್ಲಿ ನಡೆದ ವಚನಕಾರರ ಪ್ರಯತ್ನಗಳಿಗೆ, 13ನೇ ಶತಮಾನದ ಹರಿಹರನೊಬ್ಬನ ರಗಳೆ ರೂಪದ ಪ್ರತಿಕ್ರಿಯೆಗಳಿಗೆ ಮತ್ತು ವೈಫಲ್ಯಗಳಿಗೆ ಕಾರಣಗಳನ್ನು ಕುಮಾರವ್ಯಾಸ ಭಾರತ ಮೂರ್ತರೂಪದಲ್ಲಿ ತೋರಿಸುತ್ತದೆ. ರಾಜಕೀಯ ಚರಿತ್ರೆಯೊಂದೇ ಅಂದಿನ ಕಾಲದ ಎಲ್ಲ ಕವಿಗಳ ಮೇಲೂ ಹೇರಿ ಬಂದ ಒತ್ತಡವೆನ್ನುವುದನ್ನು ಗಮನಿಸಿದರೆ ವಚನಕಾರರ ಹೋರಾಟದ ಮಿತಿಗಳೂ ಅರ್ಥವಾಗುತ್ತವೆ. ಬಹಳ ಮಟ್ಟಿಗೆ ವಚನಕಾರರಲ್ಲಿ ಹೆಣ್ಣು ಮಾಯೆಯಾಗಿ ವ್ಯಕ್ತವಾಗಿದ್ದಾಳೆ.

> "ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ
> ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ
> ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ
> ಮನದ ಮುಂದಣ ಆಸೆಯೇ ಮಾಯೆ"

ಎಂದು ಜೇಡರ ದಾಸಿಮಯ್ಯನಲ್ಲಿ ವ್ಯಕ್ತವಾದರೂ ಕೂಡಾ ಉಳಿದ ವಚನಕಾರರಿಗೆ ಹೆಣ್ಣು ಸಂಸಾರದ ಮೂಲಕ ಸಾಮಾಜಿಕ ಸಂಬಂಧಗಳ ಮೂಲಕ ಮನುಷ್ಯನ ಎಲ್ಲಾ ಕಾಮನೆಗಳಿಗೆ ಸ್ತ್ರೀ ರೂಪದ ಮಾಯೆಯಂತೂ ಕಾರಣವಾಗಿ ಕಂಡಿದ್ದಾಳೆ. ಹರಿಹರ ಶಿವಭಕ್ತರ ರಗಳೆಗಳಲ್ಲಿಯೇ ಕಾಲಕಳೆದರೆ, ರಾಘವಾಂಕ ರಾಜನಾದ ಹರಿಶ್ಚಂದ್ರನನ್ನೇ ನಾಯಕನನ್ನಾಗಿ ಮಾಡಿಕೊಳ್ಳುತ್ತಾನೆ. ಜನ್ನ ಮಾನವ ಸಂಬಂಧಗಳ ಅನೇಕ ರೂಪಗಳನ್ನು ಬಿಡಿಸುತ್ತಾ ಜೈನ ಸಂಸ್ಕೃತಿಯ ಅವನತಿಯ ಚಿತ್ರಣದಲ್ಲಿ ಒದ್ದಾಡಬೇಕಾಗುತ್ತದೆ.

ಕುಮಾರವ್ಯಾಸ ಸಹ ಈ ನೆಲೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಿಲ್ಲ. ದ್ರೌಪದಿ ತನ್ನ ಗಂಡಂದಿರ ಅಸ್ತಿತ್ವವನ್ನೇ ಪ್ರಶ್ನಿಸುವ ದಿಟ್ಟೆಯಾದರೂ ಸಹ ಇಡೀ ಸಮಾಜ ಒಟ್ಟಾಗಿ ಸ್ತ್ರೀಯನ್ನು ನಡೆಸಿಕೊಂಡಿರುವ ನೆಲೆಗಳನ್ನು ಗಮನಿಸಿದರೆ ಇದು ತಿಳಿಯುತ್ತದೆ.
ಪ್ರಭುತ್ವದ ಉತ್ತರಾಧಿಕಾರದ ಸಮಸ್ಯೆಯನ್ನು ತೊಡೆಯಲು, ವಿರಹಿಗಳಾದ ರಾಜರುಗಳ ಶೃಂಗಾರವನ್ನು ಮೆರೆಯಲು, ಮತ್ತು ಅವರ ಆಸ್ತಿಯಾಗಿ ಉಳಿಯಲು ಹೆಣ್ಣು ಇಲ್ಲಿ ಮುಖ್ಯವಾಗುತ್ತಾಳೆ. ಇಲ್ಲಿನ ದುರ್ಯೋಧನ ಕಾಡಿನಲ್ಲಿರುವ ಪಾಂಡವರ ಎದುರಿಗೆ ತನ್ನ ಐಶ್ವರ್ಯವನ್ನು ಮೆರೆಯಲು, ಆ ಮೂಲಕ ಅವರಲ್ಲಿ ಕಿಚ್ಚನ್ನು ಹುಟ್ಟಿಸಲು ಬಳಸುವ ತಂತ್ರಗಳಲ್ಲಿ ದಾಸವರ್ಗದ ಹೆಣ್ಣುಗಳನ್ನು ಸ್ವೇಚ್ಛಾ ವಿಹಾರಿಗಳನ್ನಾಗಿ ಬಳಸುತ್ತಾನೆ. ಇಡೀ ಒಂದು ಸಂಧಿಯೇ ಇದಕ್ಕೆ ಮೀಸಲು ಕುಮಾರವ್ಯಾಸನಲ್ಲಿ.

ಸಂತಾನ ಕಾರಣವೂ ಸೇರಿದಂತೆ ಗಂಡಿನ ಆಳ್ವಿಕೆಯ ಮನೋಭಾವದ ಸ್ವೇಚ್ಛಾ ಪ್ರವೃತ್ತಿಯ ಬಲಿಯಾಗಿಯೇ ಕುಮಾರವ್ಯಾಸ ಭಾರತದಲ್ಲಿ ಹೆಣ್ಣು ಕಾಣುತ್ತಾಳೆ. ಅವಳಿಗೆ ಈ ಕಾವ್ಯಗಳ ಮೂಲಕ ಆರೋಪಿಸುತ್ತಾ ಹೋಗುವುದು ವ್ಯಾಖ್ಯಾನದ ಸರಳೀಕರಣವಲ್ಲದೆ ಬೇರೆಯಲ್ಲ. ಮತ್ತು ಮುಂದುವರಿದು ಹೇಳಬಹುದೆಂದರೆ ಗಂಡನನ್ನು ಕಳೆದುಕೊಂಡ (ರಾಜನನ್ನು ಕಳೆದುಕೊಂಡ) ಹೆಣ್ಣುಗಳು ಮಾತ್ರ ಸಂಸಾರ ಮತ್ತು ರಾಜಕೀಯ ಇವೆರಡರಲ್ಲೂ ಮುಂದಾಳಾಗಿ ಪ್ರವೇಶಿಸಲು ಸಾಧ್ಯ. ಆದರೆ ಈ ಮುಂದಾಳತನ ಸಹ ವಂಶವನ್ನು ಮತ್ತು ಉತ್ತರಾಧಿಕಾರವನ್ನು ಮುಂದುವರಿಸುವ ಗಂಡು ಮಕ್ಕಳ ಪೋಷಣೆಯಲ್ಲಿಯೇ ಮತ್ತೆ ಪರ್ಯವಸಾನಗೊಳ್ಳುತ್ತದೆ.

ಆಕ್ರಮಣ ಸಹ ಗಂಡಿನ ಮೂಲಭೂತ ಗುಣಗಳಲ್ಲಿ ಒಂದು. ಆತನನ್ನುಳಿದ ಮಿಕ್ಕೆಲ್ಲವನ್ನು ಆಸ್ತಿಯಾಗಿ ಭಾವಿಸುವ ಗಂಡು ತನ್ನ ಆಸ್ತಿಯನ್ನು ಸ್ವೇಚ್ಛೆಯಾಗಿ ನಡೆಸಿಕೊಳ್ಳುವುದು ಒಂದು

ಕಡೆಯಾದರೆ, ಮತ್ತೊಂದು ಕಡೆಗೆ ತನ್ನ ಅಸ್ತಿಯಲ್ಲದರ ಮೇಲೆ ಆಕ್ರಮಣ ನಡೆಸಿ ಸ್ವ ಆಸ್ತಿಯನ್ನಾಗಿ ಮಾಡಿಕೊಳ್ಳಲು ನಿರಂತರವಾಗಿ ಪ್ರಯತ್ನಿಸುತ್ತಾನೆ. ಗಂಡಿಗೆ ಆಸ್ತಿಯಾಗಿಯೇ ಪರಿಣಮಿಸಿದ ಹೆಣ್ಣು ಸಹ ಈ ಆಕ್ರಮಣದ ಪ್ರವೃತ್ತಿಯಿಂದ ಹೊರಗುಳಿಯುವುದು ಸಾಧ್ಯವಿಲ್ಲ. ಕೀಚಕ ಮತ್ತು ಸೈಂಧವರ ದ್ರೌಪದಿಯ ಮೇಲಿನ ವರ್ತನೆಗಳು, ಭೀಷ್ಮ ನಡೆಸುವ ಅಂಬೆ, ಅಂಬಿಕೆಯರ ಮೇಲಿನ ದೌರ್ಜನ್ಯ ಇದನ್ನು ಸಾರುತ್ತವೆ. ಕೌರವ ಮತ್ತು ಪಾಂಡವರ ಭೂಮಿಯ ಮೇಲಿನ ಬಯಕೆಯ ಆಕ್ರಮಣದೊಂದಿಗೆ ಈ ಅಂಶವನ್ನು ಯೋಚಿಸಬೇಕು.

ಹೆಣ್ಣು ಮಾಯೆಯಾಗಿ, ಗಂಡಿನ ವೈಭವ ಜೀವನದ ಸಂಪತ್ತಾಗಿ, ಅವನ ಆಕ್ರಮಣದ ಆಸ್ತಿಯಾಗಿ, ಅವನ ವಿರಹ ಜೀವನದ ಶೃಂಗಾರವಾಗಿ ಅವಳ ಅಸ್ತಿತ್ವವನ್ನು ಅಲಂಕರಿಸಿಕೊಳ್ಳಬೇಕಾಗಿದ್ದು ಮಾನವ ಬದುಕಿನ ಚರಿತ್ರೆಯಲ್ಲಿನ ಮೊದಲ ದುರಂತ. ನಮ್ಮ ಇಡೀ ಸಮಾಜ ವ್ಯವಸ್ಥೆಯ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ಬೊಳ್ಕೆತನಗಳಿಗೆ ಕಾರಣಗಳು ಗಂಡಸೇ ಬರೆದ ನಮ್ಮ ಚರಿತ್ರೆಗಳಲ್ಲಿದೆ. ನಮ್ಮ ಜೀವನ ಕ್ರಮಗಳಲ್ಲೇ ಇದೆ. ಗಂಡನ್ನು ಸಂಸಾರ — ಸಮಾಜ ವಿಮುಖನನ್ನಾಗಿ ಮಾಡುವ ನಶ್ವರ ರೂಪವಾಗಿಯೂ ಹೆಣ್ಣನ್ನು ಗಮನಿಸಿರುವ, ಅದನ್ನು ಉಪೇಕ್ಷಿಸಿರುವ ನಮ್ಮ ಸಾಂಸ್ಕೃತಿಕ ಚರಿತ್ರೆ ಇದನ್ನು ಸ್ಪಷ್ಟಪಡಿಸುತ್ತದೆ. ಇಂಥ ಗ್ರಹಿಕೆಗಳ ಹಿನ್ನೆಲೆಯಲ್ಲಿ ಕುಮಾರವ್ಯಾಸ ಭಾರತವನ್ನು ಮುಂದೆ ನೋಡಲಾಗಿದೆ. ಸ್ತ್ರೀವಾದಿ ಅಧ್ಯಯನದ ದೃಷ್ಟಿಯಿಂದ ಮಹಾಪ್ರಬಂಧಕ್ಕಾಗುವಷ್ಟು ಸ್ತ್ರೀ ಕಥೆಯನ್ನು ಈ ಕೃತಿ ಒಳಗೊಂಡಿದೆ. ಅಂಥ ಹೊಳಪುಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಈ ಪ್ರಬಂಧದ ಮೂಲಕ ಮಾಡಲಾಗಿದೆ. ಮತ್ತು ಇಂಥ ಉದ್ದೇಶಕ್ಕೆ ಹಿನ್ನೆಲೆಯಾಗಿ ಒದಗಿ ಬರುವಂತೆ ಇದುವರಿಗಿನ ಕನ್ನಡ ಸಂದರ್ಭದ ಸ್ತ್ರೀವಾದಿ ಚಿಂತನೆಯ ದೃಷ್ಟಿಕೋನವನ್ನು ಗಮನಿಸಿರುವುದಲ್ಲದೆ, ಕುಮಾರವ್ಯಾಸಭಾರತದ ಬಗ್ಗೆ ಬಂದಿರುವ ವಿಮರ್ಶಾ ಸಾಮಗ್ರಿಯ ಮಿತಿಗಳನ್ನು ಗುರ್ತಿಸಿಕೊಳ್ಳಲಾಗಿದೆ. ಕುಮಾರವ್ಯಾಸ ಭಾರತದ ವಿಮರ್ಶೆ ಒಂದು ರೀತಿಯಿಂದ ಮಹಾಭಾರತದ ವಿಮರ್ಶೆಯೂ ಆಗುವುದರಿಂದ ಸ್ತ್ರೀ ಬಗೆಗಿನ ಇಲ್ಲಿಯ ಆಲೋಚನೆಗಳನ್ನು ಒಟ್ಟು ಸಂಸ್ಕೃತಿಯ ಹಿನ್ನೆಲೆಯಲ್ಲಿ ಗ್ರಹಿಸಲಾಗಿದೆ, ಮತ್ತು ಆ ಮೂಲಕ ಕುಮಾರವ್ಯಾಸನ ದೃಷ್ಟಿಕೋನವನ್ನು ವಿವೇಚಿಸಲಾಗಿದೆ.

# ಅಧ್ಯಾಯ - 1

## ಸ್ತ್ರೀವಾದಿ ವಿಮರ್ಶೆ : ದೃಷ್ಟಿಕೋನ - ಪರಿಚಯ

## ಸ್ತ್ರೀವಾದ : ದೃಷ್ಟಿಕೋನ — ಪರಿಚಯ

ಮಹಿಳೆಯ ದೃಷ್ಟಿಕೋನದಿಂದ ಮಾಡಿದ ಯಾವುದೇ ಬಗೆಯ ಅಧ್ಯಯನ ಸ್ತ್ರೀವಾದಿ ಅಧ್ಯಯನ. ಗಂಡು ಹೇಗೆ ತನ್ನನ್ನು ಗಂಡು ಎಂದು ಸಮಾಜದಲ್ಲಿ ಗುರುತಿಸಿಕೊಳ್ಳುತ್ತಾನೋ ಹಾಗೆ, ಹೆಣ್ಣು ಕೂಡ ತಾನು ಹೆಣ್ಣು ಎಂದು ಗುರುತಿಸಿಕೊಳ್ಳುತ್ತಾಳೆ. ಅಂದರೆ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ತನ್ನ ಅಸ್ತಿತ್ವವನ್ನು ಸ್ಥಾಪಿಸುವುದು, ಮಹಿಳೆಯ ಅನುಭವ ಹಾಗೂ ತಿಳುವಳಿಕೆಯನ್ನು ಪುರುಷ ಜಗತ್ತು ಹೇಗೆ ಪರಿಗಣಿಸಿದೆ, ಅದನ್ನು ಸ್ತ್ರೀ ಹೇಗೆ ಸ್ವೀಕರಿಸಿದ್ದಾಳೆ ಎಂಬುದನ್ನು ಸಾಹಿತ್ಯ ಕೃತಿಯ ಮೂಲಕ ಅಧ್ಯಯನ ಮಾಡುವುದೂ ಸ್ತ್ರೀವಾದದ ಒಂದು ವಿಧ. ಅಂದರೆ ಮಹಿಳೆ — ಸಾಹಿತ್ಯ — ಸಮಾಜ ಕುರಿತಾದ ಅಧ್ಯಯನ ಇದು.

ಮಹಿಳೆ ಕಾಲಾಂತರದಿಂದ ಪುರುಷ ಪ್ರಧಾನ ಸಮಾಜದಲ್ಲಿ ಶೋಷಣೆಗೆ ಒಳಗಾಗಿದ್ದಾಳೆ. ಕೇವಲ ಜೈವಿಕ ಕಾರಣಕ್ಕಾಗಿ ಅವಳನ್ನು ತಾರತಮ್ಯದಿಂದ ನೋಡಲಾಗುತ್ತದೆ. ಸಮಾಜ ಹೆಣ್ಣಿಗೆ ನೀಡಿದ್ದು ದ್ವಿತೀಯ ದರ್ಜೆಯ ಸ್ಥಾನ. ಈ ಸ್ಥಾನಮಾನಗಳ ಬಗ್ಗೆ ಅವಳಿಗೆ ಹುಟ್ಟಿದ ಅ ಸಂತೋಷ, ಅಸಮಾನತೆ, ದಬ್ಬಾಳಿಕೆಯ ವಿರುದ್ಧ ಬಂಡಾಯ ಹೂಡಿರುವ ಸ್ತ್ರೀ ಪ್ರತಿಪಾದಿಸುವುದು ಮಾನವತಾವಾದವನ್ನು. ಸ್ತ್ರೀ ಬೌದ್ಧಿಕವಾಗಿ ಮತ್ತು ಮಾನಸಿಕವಾಗಿ ತನಗಿಂತಲೂ ಕಡಿಮೆ ಎಂದು, ಪುರುಷನಲ್ಲಿ ಡೊಮಿನೇಟಿಂಗ್ ಪ್ರವೃತ್ತಿ ಹುಟ್ಟಿನಿಂದಲೇ ಬಂದಿದೆಯನ್ನುವಷ್ಟರ ಮಟ್ಟಿಗೆ ಮೊದಲಿನಿಂದಲೂ ಬೆಳೆದು ಬಂದಿದೆ.

ಪುರುಷನ ಅನುಭವ ಮತ್ತು ಮನೋಭಾವಗಳಿಗೆ ಹೋಲಿಸಿದರೆ ಸ್ತ್ರೀ ಸಾಮರ್ಥ್ಯವನ್ನು ಕಡಿಮೆ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಆದರೆ ಅವನಿಗಿಂತ ಭಿನ್ನವಾಗಿ ಸಮಾಜ ನಿರ್ಮಾಣಕ್ಕೆ ತನ್ನ ಸಾಮರ್ಥ್ಯವನ್ನು ಬೆರೆಸುವ, ಹಾಗೆಯೇ ಅದನ್ನು ಅರ್ಪಿಸುವ ಮಹೋಧರ್ಮ ಸ್ತ್ರೀಗೆ ಇದೆ. ಇದು ಪುರುಷನ ಅನುಭವಕ್ಕಿಂತ ಹೆಚ್ಚು ಅಥವಾ ಕಡಿಮೆ ಎನ್ನುವುದಕ್ಕಿಂತ ಸ್ತ್ರೀವಾದ ಈ ಎರಡು ಭಿನ್ನ ಅನುಭವಗಳ ವ್ಯತ್ಯಸ್ತ ನೆಲೆಗಳನ್ನು ಒಪ್ಪಿಕೊಂಡೇ ಸ್ತ್ರೀಯ ಅಸ್ತಿತ್ವದ ವೈಶಿಷ್ಟ್ಯವನ್ನು ಪ್ರಕಟಿಸುತ್ತದೆ.

ಮಹಿಳೆಯ ಸಾಮಾಜಿಕ ಹಾಗೂ ವ್ಯಕ್ತಿಗತ ಮೌಲ್ಯಗಳು ಪುರುಷ ನಿರ್ಮಿತವಾದವು. ಯಾವ ವಸ್ತುವಿನ ಮೇಲೂ ಅವಳಿಗೆ ಅಧಿಕಾರವಿಲ್ಲ. ಅವಳ ಹೆಸರಿನ ಮೇಲೂ ಅವಳ ಹಕ್ಕು ಪುರುಷನಿಂದ ಪಲಾಯಿಸಲ್ಪಡುತ್ತದೆ. ಈ ಪುರುಷ ನಿರ್ಮಾಣ ಶಕ್ತಿಯನ್ನು ಹೊಡೆದು ಹೊರಗೆ ಬರುವುದು, ಸ್ತ್ರೀಗೆ ಆ ಶಕ್ತಿ ಇದೆ ಎಂದು ತೋರಿಸುವುದು ಸ್ತ್ರೀ ಹೋರಾಟದ ಪ್ರಮುಖ ನೆಲೆ.

ಇಲ್ಲಿಯವರೆಗಿನ ಮಾನವನ ಇತಿಹಾಸದಲ್ಲಿ ಮಹಿಳೆಯ ಇತಿಹಾಸವಿಲ್ಲ. ಅದು ಕೇವಲ ಪುರುಷ ಪ್ರಧಾನ ಗುಣಗಳ ಇತಿಹಾಸವಾಗಿದೆ. ಆದ್ದರಿಂದ ಅಲ್ಲಿನ ಸ್ತ್ರೀಯನ್ನು ಶೋಧಿಸಿಕೊಳ್ಳಬೇಕಾಗಿದೆ. ಒಂದು ಸಂಸ್ಕೃತಿಯ ಇತಿಹಾಸದಲ್ಲಿ ಅದೃಶ್ಯವಾಗಿರುವ ಅವಳ ಭಾಗಿತ್ವವನ್ನು ಕಂಡುಕೊಳ್ಳಬೇಕಾಗಿದೆ. ಆದರೆ ಸ್ತ್ರೀಗೆ ಪ್ರತ್ಯೇಕ ಇತಿಹಾಸ ಇರಬೇಕೆಂಬುದು ಇದರ ಅರ್ಥವಲ್ಲ. ಸಂಸ್ಕೃತಿಯ ಪ್ರಮಾಣ ಭಾಗವಾದ ಮಹಿಳೆ ಇಲ್ಲಿ ಅದೃಶ್ಯವಾಗಿದ್ದಾಳೆ. ಈ ಅದೃಶ್ಯತೆಯನ್ನು ಸ್ತ್ರೀವಾದ ಪ್ರಶ್ನಿಸುತ್ತದೆ. ಇಂಥ ರೂಢಿಗತ ಅಸಮಾನತೆಯನ್ನು ಪ್ರಶ್ನಿಸುತ್ತಲೇ ಸ್ತ್ರೀಯ ಅನನ್ಯತೆಯನ್ನು ಸಾಧಿಸುವುದು ಇದರ ಮುಖ್ಯ ಕಾಳಜಿ. ಆದ್ದರಿಂದಲೇ ಇಂದು ಮಹಿಳೆ ಐದು ಸಾವಿರ ವರ್ಷಗಳ ಪುರುಷ ಪ್ರಧಾನ ಇತಿಹಾಸದೊಡನೆ, ಈ ಇತಿಹಾಸವನ್ನು ಕೀರ್ತಿಸುತ್ತಾ ಬಂದಿರುವ ಪುರುಷ ಪ್ರಧಾನ ಮೌಲ್ಯಗಳೊಡನೆ, ಹೋರಾಟ ಪ್ರಾರಂಭಿಸಿದ್ದಾಳೆ. ಈ ಹೋರಾಟದ ಸ್ವರೂಪವನ್ನು ಸ್ತ್ರೀವಾದ ವಿವರಿಸುತ್ತದೆ.

ಪರಂಪರೆಯ ನಿರ್ಮಾಣದಲ್ಲಿ ಪುರುಷರದೇ ಮೇಲುಗೈಯಾಗಿರುವಂತೆ ಸ್ತ್ರೀಯನ್ನು ಕುರಿತ ಪುರುಷ ಚಿಂತನೆಗಳು ಹೆಚ್ಚಾಗಿವೆ. ಸಮಾಜದ ಕೆಳಗಿನ ಸ್ತರದಲ್ಲೇ ತಮ್ಮ ಚಟುವಟಿಕೆಯನ್ನು ನಡೆಸುತ್ತಾ ಬಂದ ಮಹಿಳೆ ಸಮಾಜವೊಂದರ ನಿರ್ಮಾಣಕ್ಕೆ ಪೂರಕವಾಗಿರುವ ಚಿಂತನೆಗಳಲ್ಲೂ ಭಾಗವಹಿಸಲು ಅವಕಾಶವಿಲ್ಲದೇ ಹೋಗಿದ್ದರಿಂದ ಹೊರಗೇ ಉಳಿದಳು. ಹಾಗೆ ಅವಳನ್ನು ನಡೆಸಿಕೊಂಡ ಪರಂಪರೆಯನ್ನು ಪ್ರಶ್ನಿಸುವುದೂ ಮುಖ್ಯ.

ಹೆಣ್ಣಿನ ಬುದ್ದಿ ಮೊಳಕಾಲ ಕೆಳಗೆ
ಹೆಣ್ಣು ತಿರುಗಿ ಕೆಟ್ಟಳು, ಗಂಡು ಕೂತು ಕೆಟ್ಟ,
ಜಡೆ ಕೆಳಗೆ ಮೀನೆ ಮೇಲೆ
ಹೆಣ್ಣು ಮಣ್ಣಿನ ಮಡಿಕೆ ಗಂಡು ತಾಮ್ರದ ಪಾತ್ರೆ.

ಮುಂತಾದ ಪುರುಷನ ಸಾಮಾಜಿಕ ವ್ಯಾಖ್ಯಾನಗಳು ಆತನ ಅಧಿಕಾರ ಪ್ರವೃತ್ತಿಯ ವ್ಯಾಖ್ಯಾನಗಳೇ ಆಗಿವೆ. ಕನ್ಯಾಪಹರಣ, ಜಲಕ್ರೀಡೆ, ವನವಿಹಾರ, ವೇಶ್ಯಾವಾಟಿಕೆ, ಸುರತ ಕೇಳಿಗಳ ವರ್ಣನೆಗಳು, ನಾಯಕನ ನಿತ್ಯ ಸೇವೆಗಳಾದ ಮಜ್ಜನ, ಲೇಪನ, ಮೊದಲಾದವುಗಳು ಹೆಂಗಸರಿಂದ ನಡೆಯುವಂತೆ ಚಿತ್ರಿಸಲಾಗಿದೆ. ಇದು ಪುರುಷ ಕೇಂದ್ರಿತ ಸಂಸ್ಕೃತಿಯಲ್ಲಿ ಪುರುಷಾಧಿಕಾರದ ಪಾರಮ್ಯವನ್ನು ಪ್ರತಿಪಾದಿಸುತ್ತಾ ಸ್ತ್ರೀ ವ್ಯಕ್ತಿತ್ವವನ್ನು ಭೋಗವಸ್ತುವಿನ ಸ್ಥಿತಿಗೆ ಇಳಿಸಿ ಉಳಿಸಲು ನೆರವಾಗುವ ಭೋಗ ಪ್ರಪಂಚವನ್ನು ಸೃಷ್ಟಿಸಿದೆ. ನಮ್ಮ ಸಾಹಿತ್ಯದಲ್ಲಿ ಸ್ತ್ರೀಯನ್ನು ಗರತಿ, ಕುಲಟೆ, ಮಾಯೆ, ಸಾಧ್ವಿ, ಅಪಕೀರ್ತಿನಾರಿ, ದುಷ್ಕೀರ್ತಿನಾರಿ, ಮದನನ ಕೂರಲಗು, ವಿಜಯಾಂಗನೆ, ಶಾಕಿನಿ ಡಾಕಿನಿ ಮುಂತಾದ ಧ್ರುವೀಕೃತ ಮೌಲ್ಯ ಪ್ರತೀಕಗಳಲ್ಲೇ ಚಿತ್ರಿಸಲಾಗಿದೆ. ನಮ್ಮ ಕವಿಗಳಿಗೆ ಸ್ತ್ರೀ ತಮ್ಮ ಕಾವ್ಯಗಳಲ್ಲಿ ಪುತ್ರ ಸಂತಾನಕ್ಕೆ, ಗಂಡಿನ ವಿರಹದಾಗ್ನಿಯ ಕಿಚ್ಚನ್ನು ಹೇಳವುದಕ್ಕೆ,

ಆತನ ಸೇವಕ ಕ್ರಿಯೆಗಳಿಗೆ, ಆತನ ಶೌಚತೆಯನ್ನು ಗುರ್ತಿಸುವುದಕ್ಕೆ ಮತ್ತು ನೀತಿಬೋಧಕ, ವೈರಾಗ್ಯ ಪ್ರತಿಪಾದಕ, ಇಲ್ಲವೇ ರಸಪ್ರತಿಪಾದಕ ಅವಶ್ಯಕತೆಗಳಿಗೆ ಅನುಗುಣವಾಗಿ ಬಳಕೆಯಾಗಿದ್ದಾಳೆಯೇ ಹೊರತು ಮಾನವೀಯ ದೃಷ್ಟಿಯ ಪ್ರತಿಪಾದನೆಗೆ ತೀರಾ ಗೌಣವಾಗಿದ್ದಾಳೆ. ಆದ್ದರಿಂದಾಗಿಯೇ ಅವಳನ್ನು ಪ್ರಾಣಿ ಸಮೂಹದ ಜೊತೆ, ಅಥವಾ ಆಸ್ತಿಯ ಒಂದು ಭಾಗವಾಗಿ ಮಾತ್ರ ಹೇಳಲಾಗಿದೆ.

ಹುಟ್ಟನಿಂದ ಪುರುಷನಿಗಿಂತ ಕೀಳಾಗಿ ಭಾವಿಸಲ್ಪಡುವ ಸ್ತ್ರೀ ಮೋಕ್ಷಕ್ಕೆ ಅನರ್ಹಳು ಎಂಬ ಭಾವನೆ ಮತ್ತು ಪುರುಷನ ಮೋಕ್ಷ ಸಾಧನೆಯ ಹಾದಿಗೆ ಆಕೆ ಅಡ್ಡಿಅವಳೆಂದು ನರಕಪ್ರೇ[illegible] ಎಂಬ ಧೋರಣೆಯನ್ನು ಪ್ರಕಟಪಡಿಸಲಾಗಿದೆ. ವಚನಕಾರ್ತಿಯಾದ ಲಿಂಗಮ್ಮ ''ಏಕೆನ್ನ ಹುಟ್ಟಿಸಿದೆಯೆಯ್ಯ ಹೆಣ್ಣು ಜನ್ಮದಲ್ಲಿ ?, ಪುಣ್ಯವಿಲ್ಲದ ಪಾಪಿಯೊ , ನಾನು ಇಹಪರಕ್ಕೆ ದೂರಳಯ್ಯ, ಎಂದು ಪ್ರಲಾಪಿಸುವುದು ಕೇವಲ ವೈಯುಕ್ತಿಕ ಎಂದು ಭಾವಿಸಲಾಗುವುದಿಲ್ಲ. ಭಾರತಕತೆಯಲ್ಲಿ ದ್ರೌಪದಿ ಹೆಣ್ಣಾದ ಮಾತ್ರಕ್ಕೆ ಸ್ವರ್ಗಕ್ಕೆ ಹೋಗಲು ಸಾಧ್ಯವಾಗಲಿಲ್ಲ. ಅಷ್ಟೇ 'ಏಕೆ ನಮ್ಮ ಸಂಸ್ಕೃತಿಯಲ್ಲಿ ಯಾವ ಹೆಣ್ಣು ಸ್ವರ್ಗಕ್ಕೆ ಹೋಗಲು ಅನರ್ಹಳು ಎಂದೇ ವ್ಯಾಖ್ಯಾನಿಸಲಾಗಿದೆ. ಹೆಣ್ಣಿಗೆ ಅಂತಿಮವಾಗಿ ಕಾಡು ಇಲ್ಲವೇ ಬೆಂಕಿ ಅಥವಾ ಭೂಮಿ ಬಾಯ್ತೆರೆದು ಕಾದಿರುತ್ತದೆ. ಹಾಗೇ ಇತಿಹಾಸ ಆಕೆಯನ್ನು ತನಗೆ ಬೇಕಾದಂತೆ ಸೃಷ್ಟಿಸಿಕೊಂಡಿದೆ. ಹೆಣ್ಣು ಒಡವೆ, ಆಸ್ತಿ ಎನ್ನುವ ಕಲ್ಪನೆಯಿರುವ ಈ ವ್ಯವಸ್ಥೆಯಲ್ಲಿ ' ಗಂಡು ಮೋಹಿಸಿ ಹೆಣ್ಣು ಹಿಡಿದಡೆ ಅದು ಒಬ್ಬರ ಒಡವೆಯೆಂದರಿಯಬೇಕು. ಹೆಣ್ಣು ಮೋಹಿಸಿ ಗಂಡ ಹಿಡಿದಡೆ ಉತ್ತರವಾವುದೆಂದ ರಿಯಬೇಕು '' (ಗೊಗ್ಗವ್ವೆ) ಇದು ಪುರುಷ ಪ್ರಧಾನ ಸಮಾಜದ ಮಹಿಳೆಯ ಇಕ್ಕಟ್ಟಿನ ಪ್ರಶ್ನೆ. ಇದಕ್ಕೆ ಉತ್ತಮ ಉದಾ: ಭೀಷ್ಮ ವಿವಾಹ ಮಂಟಪಕ್ಕೆ ನುಗ್ಗಿ ಅದನ್ನು ಹಾಳುಗೆಡವಿ ಅಂಬೆ,ಅಂಬಿಕೆ, ಅಂಬಾಲಿಕೆಯನ್ನು ವಿಚಿತ್ರವೀರ್ಯನಿಗಾಗಿ ಎಳೆದು ತರುವ ಕತೆ.

ಸಾಹಿತ್ಯದಲ್ಲಿ ಮಹಿಳೆಗೆ ನಿಷ್ಕಾಮ ಪ್ರೇಮ,ನಿಷ್ಠೆ,ತ್ಯಾಗ, ಸಹನಶೀಲತೆ ಇತ್ಯಾದಿ ಪರಂಪರಾಗತ ಮೌಲ್ಯಗಳ ಹೊರೆ ಹೊರಿಸಿ ಅವಳನ್ನು ರೊಮ್ಯಾಂಟಿಕ್ ರೀತಿಯಲ್ಲಿ ಚಿತ್ರಿಸಿ ದೇವಿಯನ್ನಾಗಿಸುವ ಮತ್ತು ಇದಕ್ಕೆ ಪೂರಕವಾಗಿ ದ್ವೇಷ, ಅಸೂಯೆ,ಸಂಕುಚಿತ ಮನೋಭಾವನೆ ಇರುವ,ಪುರುಷನನ್ನು ವಿ-
ನಾಶ ಮಾಡುವ ಬುದ್ಧಿಯುಳ್ಳ ರಾಕ್ಷಸೀ ರೂಪವಾಗಿಯೂ ಚಿತ್ರಿಸುವ ಪರಂಪರೆ ಬೆಳೆದು ಬಂದಿದೆ.
ನಡೆಯು
ಕಾದ ಅಂಶವೆಂದರೆ ಮಹಿಳೆ ದೇವಿಯೂ ಅಲ್ಲ ಅಥವಾ ರಾಕ್ಷಸಿಯೂ ಅಲ್ಲ. ಅವಳನ್ನು
ಪಾರವಶ್ಯವನ್ನು ... ಜನ ಸ್ವೀಕರಿಸಿದ್ದಾರೆ ? ಎಷ್ಟು ಜನ ಲೇಖಕರು ಮನುಷ್ಯಳನ್ನಾಗಿ
ನೆರವಾಗುವ ಭೋಗ ಪ್ರ ಕರಾದರೂ ದ್ರೌಪದಿಯನ್ನು ಗಂಡೆಂದೇ ಗುರುತಿಸುವರೇ ವಿನಾ
ಮಾಯೆ, ಸಾಧ್ವಿ, ಅಪಕೀರ್ತಿ ತೆ ತೋರುತ್ತದೆ. ಸಮಾಜ ಹೆಣ್ಣಿಂದ ಯಾವ ಗುಣಗಳನ್ನು
ಶಾಕಿನಿ ಡಾಕಿನಿ ಮುಂತಾದ ಧು ಕೆಂದು ಬಯಸಿದೆ, ಎನ್ನುವುದಕ್ಕೆ ನಮ್ಮ ಈ ಇತಿಹಾಸ,ಸಾಹಿತ್ಯ
ಸ್ತ್ರೀ ತಮ್ಮ ಕಾವ್ಯಗಳಲ್ಲಿ ಪ ಡಿಂತಿವೆ.

ಮಹಿಳೆಯ ದೇಹ ಮತ್ತು ಮನಸ್ಸನ್ನು ಪುರುಷಾಧೀನವಾಗಿಸಿದೆ, ಅವಳ ದುಡಿಮೆ ಮತ್ತು ತಾಯ್ತನದ ಹಕ್ಕನ್ನು ತನ್ನ ಹತೋಟಿಯಲ್ಲಿಟ್ಟುಕೊಂಡ ವ್ಯವಸ್ಥೆ ಸಹನೆ ಕ್ಷಮೆ ವಿಧೇಯತೆಗಳ ಮೇಲಿಂದ ಅವಳು ತಲೆಯೆತ್ತದಂತೆ ಮಾಡಲು ಸತತವಾಗಿ ಯತ್ನಿಸಿತು. ಹೆಚ್ಚೆಂದರೆ ರಾಜಿಯ, ಹಿಂಬಾಗಿಲಿನಿಂದ ಒಳನೇರಿಕೊಳ್ಳುವ ಮಾರ್ಗೋಪಾಯಗಳನ್ನು ಇಂಥ ವ್ಯವಸ್ಥೆ ಚಲಾವಣೆಗೆ ಬಿಟ್ಟದೆಯೇ ಹೊರತು ಮುಖಾ ಮುಖಿಯಾದ ಘರ್ಷಣೆ,ಹಕ್ಕು ಸಾಧಿಪನೆಯ ಮಾರ್ಗಗಳನ್ನು ಬೆಂಬಲಿಸಿಲ್ಲ. ಇಂಥ ಒತ್ತಡಗಳ ನಡುವೆಯೂ ಸ್ತ್ರೀಯಲ್ಲಿ ಹಕ್ಕು ಸಾಧಿಪನೆಯ ಗುಣಗಳು ಕಾಣಿಸಿಕೊಂಡಾಗ ಆಕೆಯನ್ನು ಗಂಡೆಂದು ವ್ಯಾಖ್ಯಾನಿಸಲಾಯಿತು.

ಮನುಷ್ಯನ ಇತಿಹಾಸದಲ್ಲಿ ಮೊದಲು ಸ್ತ್ರೀ ದಾಸ್ಯಕ್ಕೆ ಹೇಗೆ ಒಳಗಾದಳೆಂಬುದಕ್ಕೆ ಅನೇಕ ರೀತಿಯ ಉತ್ತರಗಳು ಸಾಧ್ಯ. ಹೆಣ್ಣನ್ನು ಶಸ್ತ್ರಹೀನಳನ್ನಾಗಿಸಿದ ಗಂಡು, ಹೆಣ್ಣಿನ ಅಧೀನತೆಯನ್ನು ಸಾಧಿಪಿಸಲು ಉತ್ಪಾದನೆಯನ್ನು ತನ್ನ ಅಸ್ತ್ರವನ್ನಾಗಿ ಇರಿಸಿಕೊಂಡ. ಆದರೆ ಒಂದು ಕ್ಷಣದಲ್ಲಿ,ಒಂದು ದಿನದಲ್ಲಿ ಇತಿಹಾಸ ಪಡೆದ ತಿರುವು ಇದಲ್ಲ. ಕ್ರಮೇಣ ಈ ದಾಸ್ಯದ ಅಸಮಾನತೆಯ ಪರಂಪರೆ ಬೆಳೆಯಿತು. ಮಹಿಳೆ ಉತ್ಪಾದನಾ ಕ್ಷೇತ್ರದಿಂದ ಆಮೂಲಕ ಸಾಮಾಜಿಕ ರಾಜಕೀಯ ಸಾಂಸ್ಕೃತಿಕ ವಲಯಗಳ ಮುಖ್ಯ ಪ್ರವಾಹದಿಂದ ಹೊರಗೆ ದಬ್ಬಲ್ಪಟ್ಟಳು. ಕುಟುಂಬಕ್ಕೆ ಅವಳನ್ನು ಕಟ್ಟಿ ಹಾಕಲಾಯಿತು. ಮಾತೃತ್ವ, ಪತ್ನೀತ್ವ,ಸ್ತ್ರೀತ್ವದ ಆದರ್ಶಗಳು ಕ್ರಮೇಣ ಅವಳ ಮೇಲೆ ಹೇರಲ್ಪಟ್ಟವು, ಈ ಆದರ್ಶಗಳು ಅವಳನ್ನು ಆಳಲು ರೂಪಿತವಾಗಿದ್ದೇ ಆಗಿದೆ. ಆದರಿಂದಾಗಿಯೇ ' ಅವಳ ಹಿತದೃಷ್ಟಿಯಿಂದ ' ಎಂಬ ಕಣ್ಕಟ್ಟಿನ ಇತಿಹಾಸ ಇಂದು ನಮ್ಮ ಮುಂದಿದೆ.

ಸ್ತ್ರೀ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ತಂದು ಕೊಟ್ಟದ್ದು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ವಚನಯುಗವೆಂದು ತಿಳಿಯುವುದಾದರೂ, ಅಧ್ಯಾತ್ಮಿಕ ಸಾಧನೆಯ ವಲಯದಲ್ಲಿ ಹೆಣ್ಣು ಗಂಡಿನ ನಡುವೆ ಯಾವ ತರತಮಗಳು ಇಲ್ಲವೆಂದು ಈ ಚಳುವಳಿ ಪ್ರತಿಪಾದಿಸಿತಾದರೂ ಉಳಿದ ಬಗೆಯ ಸಮಾನತೆಯತ್ತ ಕೈಚಾಚಲಿಲ್ಲ. ಬದಲಿಗೆ ಸಾಂಪ್ರದಾಯಿಕತೆಯನ್ನೆ ಅದು ಒಪ್ಪಿ ಕೊಂಡಿತ್ತು. ಸಾಂಪ್ರದಾಯಿಕ ಹೆಣ್ಣಿನ ಪಾತ್ರಕ್ಕಿಂತ ಭಿನ್ನವಾದ ಪಾತ್ರವನ್ನು ಅಪೇಕ್ಷಿಸುವ ಸ್ಥಿತಿ ಹನ್ನೆರಡನೆಯ ಶತಮಾನದಲ್ಲಿರಲಿಲ್ಲ, ಸಂಸಾರದೊಂದಿಗೆ, ಇಲ್ಲವೇ ಅಧ್ಯಾತ್ಮ ಸಾಧನೆಯ ಸೀಮಿತ ಅರ್ಥವನ್ನು ಅಲ್ಲಿ ವೈಭವೀಕರಿಸಲಾಯಿತು. '' ಹೆಣ್ಣು ಗಂಡಿನ ನಡುವೆ ಸುಳಿವಾತ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ '' ಎಂದು ಆದರ್ಶೀಕರಿಸಲಾಯಿತು. ಅನೇಕ ರೀತಿಗಳಲ್ಲಿ ದೌರ್ಬಲ್ಯಕ್ಕೊಳಪಡಿಸಿ ಹೆಣ್ಣನ್ನು ಅಧೀನವಾಗಿಸಿ ಪ್ರತಿಯೊಬ್ಬನ ಮನದೊಳಗಿನ ಆಳುವ ಪ್ರಬಲೇಚ್ಛೆ ಸುವರ್ಣವಕಾಶವನ್ನು ಪಡೆಯಿತು. ಈ ಸೇವಾ ರೂಪ ಬೆಳೆದು ನಿಂತು ಹೆಣ್ಣಿನ ಜೀವನ ಕ್ರಮವೇ ಆದಾಗುವಂತೆ ಪುರುಷ ಸಂಸ್ಕೃತಿ ನಿರ್ಣಯಿಸಿತು.

ಪುರುಷನು ಧರ್ಮ ವರ್ಗ,ಮತ್ತು ಜಾತಿಯ ಕಾರಣಕ್ಕಾಗಿ ಶೋಷಿತನಾಗಿದ್ದರೆ ಹೆಣ್ಣು ಈ ಮೂರೂ ಒಳಗೊಂಡಂತೆ ಪುರುಷನಿಂದಲೂ ದಬ್ಬಾಳಿಕೆಗೆ ಒಳಗಾದಳು. ಅದ್ದರಿಂದಲೇ ಪುರುಷನು ಧರ್ಮ ವರ್ಗ

ತು, ಜಾತಿಯ ವಿರುದ್ಧ ನಡೆಸುವ ಹೋರಾಟದಲ್ಲಿ ತಾನೂ ಭಾಗಿಯಾಗುತ್ತಲೇ ಮಹಿಳೆಯರಿಗೆ
ಷ್ಟವಾದ ಪುರುಷ ನಿರ್ಮಿತ ಕಟ್ಟಳೆಗಳ ವಿರುದ್ಧ ಸಾಮಾಜಿಕವಾಗಿ ವೈಯುಕ್ತಿಕವಾಗಿ ಹೋರಾಡಬೇಕಿದೆ.

'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದು ಘೋಷಿಸಿದ ಮನುವಿನ ಪ್ರಭಾವ ನಂತರದ ಹಲವಾರು
ಮಾನಗಳ ಕಾಲಕೂ ಹಬ್ಬಿತು. ಪತಿಯೇ ಪರದೈವ' ಎಂದು ಸಾರಿದ ಮನು ಹೆಣ್ಣಿನ ನಿಷ್ಠೆಯನ್ನು
ತನಿಗೆ ಖಾಯಂಗೊಳಿಸಿದ, ಹೆಣ್ಣಿನ ಬಗ್ಗೆ ತೋರುವ ನಿರ್ಲಕ್ಷ್ಯ ಒಂದೆಡೆಯಾದರೆ, ಹೆಣ್ಣನ್ನು ಹೆರುವ
ಾತ್ರತಲು ಕೂಡ ಹೆಣ್ಣು ಮಗುವಿನ ಹುಟ್ಟಿಗೆ ತೋರಿಸುವ ನಿರ್ಲಕ್ಷ್ಯಕ್ಕೆ ಕಾರಣ ಸಮಾಜದ್ದೇ ಆಯಿತು.
ಮೂಲಕ ಹೆಣ್ಣಿಗಿರುವ ಸ್ಥಾನಮಾನವನ್ನು ಇದರಿಂದ ನಿರ್ಧರಿಸುವಂತೆಯೂ ಆಯಿತು.

ಮೋಕ್ಷಕ್ಕೆ ಗಂಡೇ ಕಾರಣ ಎಂಬ ನಂಬುಗೆ ಮೂಲ್ಯವಾಗಿದ್ದರಿಂದ ಅವನ ಹುಟ್ಟಿಗೆ ಪ್ರಾಶಸ್ತ್ಯ
ತು. ಪಾಪ ಪುಣ್ಯಗಳ ಕಲ್ಪನೆ, ಸ್ವರ್ಗ ನರಕದ ಕಲ್ಪನೆ ಪುರುಷನಿಷ್ಠ ಮನಸ್ಸುಗಳಲ್ಲಿ ಹೆಬ್ಬಿದಷ್ಟೆ
ಗ ಹೆಚ್ಚು ಮುಖ್ಯವಾಗಿ ಗೋಚರಿಸಿದ. ಅವನು ಮುಕ್ತಿ ಮಾರ್ಗಕ್ಕೆ ಕರೆದೊಯ್ಯುವ ನಾವೆಯಾದ,
ಾಹದ ಉದ್ದೇಶವೂ ಪ್ರಮುಖವಾಗಿ ಪುತ್ರ ಪ್ರಾಪ್ತಿಗಾಗಿಯೇ ಎಂದಾಯಿತು. ಗಂಡಿನ ಸಾವಿಗೂ
ಹತ್ವ ಬಂದಿತು. ಆತನ ಸಾವಿನೊಂದಿಗೆ ಹೆಣ್ಣು ಸಜೀವ ಶವವಾದಾಗ, ಆಕೆಯ ಪಾತಿವ್ರತ್ಯ ಎಂದು ಹೊಗಳ
ಯಿತು. ಹೆತ್ತವರ ಅಪರ ಕರ್ಮಗಳಲ್ಲಿ ಹೆಣ್ಣು ಮಕ್ಕಳ ಉದ್ಧಾರವಿಲ್ಲ. ಅಂತೆಯೇ ಗಂಡನ ಅಪರ
ರ್ಮದಲ್ಲೂ ಹೆಂಡತಿಗೆ ಸ್ಥಾನವಿಲ್ಲ.



ಹೆಣ್ಣಿನ ಫಲವಂತಿಕೆಯನ್ನು ಹೇಸಿಗೊಳಿಸಿದ (ಅಪ್ಪೃಶ್ಯಗೊಳಿಸಿದ) ವೈಚಿತ್ರ್ಯದ ಹಿಂದೆ ಪುರುಷನಿಷ್ಠ
ನಸ್ಸಿನ ಕೌರ್ಯ ಸ್ಪಷ್ಟವಾಗುತ್ತದೆ. ಮುಟ್ಟಾದ ದಿನಗಳಲ್ಲಿ ಹೆರಿಗೆಯಾದ ಸಂದರ್ಭದಲ್ಲಿ ಮೈಲಿಗೆ
ುದ್ಧ ಇತ್ಯಾದಿ ಆರೋಪಗಳನ್ನು ಹೊರಿಸಿ ಅಸ್ಪೃಶ್ಯಳನ್ನಾಗಿಸಿದ. ಗರ್ಭ ಧರಿಸದ ಸಂದರ್ಭದಲ್ಲೂ ಹೆಣ್ಣನ್ನು
ನವಾಗಿ ಕಾಣುವುದು ಪುರುಷ ಸಮಾಜದಲ್ಲಿ ಅಧೀನತೆಯನ್ನು ಕಲ್ಪಿಸಲೆಂದೇ. ಆದ್ದರಿಂದ ಗರ್ಭ —
ತವನ್ನು ಸಾಂಸ್ಕೃತೀಕರಣ ಗೊಳಿಸಿದ್ದನ್ನು ಮಹಿಳಾವಾದ ಮೂಲಭೂತ ಪ್ರಶ್ನೆಯಾಗಿ ಮುಂದಿಡುವುದು,
ರುಷವೆಂಬ ಕ್ರೌರ್ಯದ ವಿರುದ್ಧವೇ ಆಗಿದೆ.

ಸ್ತ್ರೀವಾದ ಎನ್ನುವುದು ಬೌದ್ಧಿಕ ಕಸರತ್ತಲ್ಲ. ಸ್ವಾಭಿಮಾನಿಯಾದ ಹೆಣ್ಣು ತನ್ನ ಘನತೆ ಗೌರವದ
ಗ ಜಾಗೃತಳಾಗಿ ತನ್ನ ಸುತ್ತಣ ಪರಿಸರದಿಂದಲೂ ಅಂತಹುದೇ ಪ್ರತಿಕ್ರಿಯೆಗಳನ್ನು ಬಯಸುವಂತಹುದಾಗಿ
ದ್ದರಿಂದ ಸ್ತ್ರೀವಾದ ಕೇವಲ ಅಕಡಮಿಕ ಅದ ಶಿಸ್ತಲ್ಲ. ಅದು ಸಿದ್ಧ ಮಾನದಂಡಗಳ ಚಾಲಕ ಸ್ಥಿತಿಯಲ್ಲ.
ಷತ್ವದ ದಮನದ ಮೂಲಗಳನ್ನು ಗುರುತಿಸಿ, ಅದರ ಸ್ವರೂಪದ ಅಧ್ಯಯನ ನಡೆಸಿ, ಸಂಸ್ಕೃತಿಯಲ್ಲಿ
ತ್ರೀಯ ಅನುಭವ ಪ್ರಪಂಚವನ್ನು ಆ ಮೂಲಕ ಅನಾವರಣ ಗೊಳಿಸಿ ಕೊಳ್ಳುವುದು ಸ್ತ್ರೀವಾದವಾಗಿದೆ.

ಪುರುಷ ಪ್ರಧಾನ ಮೌಲ್ಯಗಳು ಸಂಸ್ಕೃತಿಗೆ ಅನುಕೂಲಕರವಾದ ಅರ್ಧಸತ್ಯವನ್ನಷ್ಟೇ ಹೇಳುತ್ತದೆ,
ಈ ಪುರುಷ ಕೇಂದ್ರಿತ ಗ್ರಹಿಕೆಯ ಮಿತಿಯನ್ನು ಸ್ತ್ರೀವಾದ ಗುರ್ತಿಸಿ ಹೇಳುತ್ತದೆ.

ತಾಯ್ತನದ ಹಂಬಲ, ಸತೀತ್ವ, ಶೀಲ, ಪಾತಿವ್ರತ್ಯ ಎಲ್ಲವೂ ಪರಂಪರೆ ಹೇರಿದ ಹೇರಿಕೆಯೇ
ವಿನಾ ಹೆಣ್ಣಿನ ವರ್ಣತಂತುಗಳಲ್ಲೇ ಹರಿದು ಬರುವಂಥದ್ದಲ್ಲ. ಪ್ರತಿವ್ಯಕ್ತಿಯಲ್ಲೂ ಹೆಣ್ಣು ಗಂಡು
ಗುಣಗಳಿವೆ. ಆದರೆ ಸಮಾಜ ಧೈರ್ಯ ಸಾಹಸ ಆಕ್ರಮಣಶೀಲತೆಯನ್ನು, ಗಂಡಿನಲ್ಲಿ ಘೋಷಿಸಿ,
ಹೆಣ್ಣಿನಲ್ಲಿ ಸಹನೆ, ಸಂಯಮ, ವಿಧೇಯತೆಗಳು ಹೆಣ್ಣು ಗುಣಗಳೆಂದು ಪ್ರೋತ್ಸಾಹಿಸಿತು. ಇದನ್ನು
ದೌರ್ಬಲ್ಯ ಎಂದು ಸಾರಿತು. ಆದರೆ ಗಂಡುಗುಣಗಳೆಲ್ಲ ಸಾಹಸ ಪ್ರವೃತ್ತಿಯವು, ಹೆಣ್ಣು ಗುಣಗಳೆಲ್ಲ
ದೌರ್ಬಲ್ಯ ಪ್ರವೃತ್ತಿಯವು ಎಂಬುದನ್ನು ಸ್ತ್ರೀವಾದ ಮೂಲಭೂತವಾಗಿ ತಿರಸ್ಕರಿಸುತ್ತದೆ.

ನಮ್ಮ ಚರಿತ್ರೆಯಲ್ಲಿ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣಿನ ಅನುಭವಗಳನ್ನು ಗಣನೆಗೆ ತೆಗೆದು
ಕೊಳ್ಳದ್ದರಿಂದ ಸ್ತ್ರೀಯರ ಅನಿಸಿಕೆ ಅನುಭವ ಸಾಧನೆ ದಾಖಲಾಗದೆ ಏಕಮುಖ ಚರಿತ್ರೆ ನಮ್ಮ-
ದಾಗಿದ್ದರಿಂದ ಇಂದೂ ಕೂಡಾ ಬಹುಮಟ್ಟಿನ ಮಹಿಳಾ ಹೋರಾಟಗಾರರಲ್ಲಿ ಅದೇ ಪುರುಷ ಪ್ರಭಾವಿತ
ಗೊಂದಲಗಳನ್ನು ಕಾಣುತ್ತಿದ್ದೇವೆ.

ಸಂಸ್ಕೃತಿ ಮಹಿಳೆಯ ವ್ಯಕ್ತಿತ್ವವನ್ನು ಉಪೇಕ್ಷಿಸಿ ಅವಳ ಇಡೀ ಬದುಕನ್ನೇ ನೇಪಥ್ಯಕ್ಕೆ ತಳ್ಳಿದ
ಒತ್ತಡ ಪುರುಷ ಕೇಂದ್ರಿತ ಕೃತಿಗಳಲ್ಲಿ ಇರುವುದರಿಂದ ಕೃತಿ ಹೇಳುವುದಷ್ಟನ್ನೇ ಪೂರ್ಣ ಸತ್ಯವೆಂದು
ಒಪ್ಪಿ ಸುಮ್ಮನಾಗದೆ, ಹೇಳದ್ದನ್ನು, ಪದ ಪದಗಳ ನಡುವಿನ ಮೌನವನ್ನು ಸ್ತ್ರೀವಾದವು ಬಿಚ್ಚಿಡಲು
ಪ್ರಯತ್ನಿಸುತ್ತದೆ.

ಸ್ತ್ರೀವಾದದ ಸಾಂಸ್ಕೃತಿಕ ನೆಲೆಗಳನ್ನು ಪ್ರಧಾನವಾಗಿ ಆರ್ಥಿಕ ಸ್ವಾವಲಂಬನೆಯಲ್ಲಿ ಇದೆ ಎಂದು
ಅನೇಕ ಸ್ತ್ರೀವಾದಿಗಳು ಗುರುತಿಸುತ್ತಾರೆ. ಆದರೆ ಹೆಣ್ಣಿಗೆ ಆರ್ಥಿಕ ಸ್ವಾವಲಂಬನೆ ಬೇಕೆಂಬುದು ನಿಜವಾದರೂ
ಆರ್ಥಿಕ ಸ್ವಾವಲಂಬನೆಯಿಂದ ಹೆಣ್ಣಿನ ಶೋಷಣೆ ತಪ್ಪುತ್ತದೆ, ಅಥವಾ ಸಂಪೂರ್ಣ ಸಮಾನತೆ ಸಿಗುತ್ತದೆ
ಎಂದು ಹೇಳುವುದು ಕಷ್ಟ. ಯಾಕೆಂದರೆ ಆರ್ಥಿಕ ಸ್ವಾವಲಂಬನೆಯ ಪ್ರಶ್ನೆ ಪ್ರತ್ಯೇಕ ಮನೋಧರ್ಮವಾಗದೆ
ಸಮಾಜ ವ್ಯವಸ್ಥೆಯಲ್ಲಿ ಗಂಡು ಹೆಣ್ಣುಗಳಿಬ್ಬರಲ್ಲೂ ಮಾನವೀಯ ಭಾಗಿತ್ವವನ್ನು ಒಳಗೊಳ್ಳುವುದೇ
ಆಗಿರಬೇಕು. ಇದರ ನಿರಂತರ ಮುಖಾಮುಖಿಯನ್ನು ವ್ಯಕ್ತಿ ಮತ್ತು ಸಮಾಜ ಈ ಎರಡೂ ನೆಲೆಗಳಲ್ಲಿ
ಒಪ್ಪಿ ಕೊಳ್ಳಬೇಕು. ಹೆಣ್ಣು ಲಿಂಗಾಧಾರಿತ ನೀತಿ ಸೃಷ್ಟಿಸಿರುವ ಎಲ್ಲ ವ್ಯತ್ಯಾಸಗಳನ್ನು ಪಡೆದು ಹುಟ್ಟು
ವುದಿಲ್ಲವಾದ್ದರಿಂದ, ಸ್ತ್ರೀಲಿಂಗಿಯಾಗಿ ಹುಟ್ಟುವ ಆಕೆಯನ್ನು, ಸಮಾಜ, ಸಂಸ್ಕೃತಿ ಸ್ತ್ರೀಲಿಂಗ ಜಾತಿ-
ಯಲ್ಲಿ ಬೆಳೆಸುವುದನ್ನು ನಿರಾಕರಿಸಬೇಕು.

ಒಟ್ಟಿನಲ್ಲಿ ಪುರುಷ ಹೇಗೆ ಒಂದು ಸಮಾಜ ವ್ಯವಸ್ಥೆಯಲ್ಲಿ ಸ್ವತಂತ್ರ ಅಸ್ತಿತ್ವವೋ ಹಾಗೆಯೇ ಸ್ತ್ರೀ ಸಹ ಒಂದು ಸ್ವತಂತ್ರ ಅಸ್ತಿತ್ವ. ಆಕೆಯನ್ನು ಪುರುಷನ ಸಾಧನೆಯಿಂದ ಹಿಂದಕ್ಕೆ ನೂಕಬೇಕಾದ ಯಾವ ಕಾರಣಗಳೂ ಇಲ್ಲ. ಸಂಸ್ಕೃತಿಯ ಹುನ್ನಾರದ ಇಂಥ ಅದೃಶ್ಯ ಸ್ಥಿತಿಯಿಂದ ಹೊರಗೆ ಬಂದು, ಸಂಸ್ಕೃತಿಯ ಗತಿಶೀಲತೆಯಲ್ಲಿ ತನ್ನ ಪಾತ್ರವನ್ನೂ ಗುರ್ತಿಸಿ ಹೇಳಬೇಕಾದ ಅನಿವಾರ್ಯತೆ ಇಂದು ಸೃಷ್ಟಿಯಾಗಿದೆ. ಇಂಥ ಜವಾಬ್ದಾರಿ ಸ್ತ್ರೀವಾದಕ್ಕಿದೆ.

ಇಲ್ಲಿಯತನಕ ಸ್ತ್ರೀವಾದಿ ವಿಚಾರಗಳ ಹಿನ್ನೆಲೆಯಲ್ಲಿ ಈ ಎಲ್ಲ ಮಾತುಗಳನ್ನು ಹೇಳಲಾಯಿತು. ಇಂಥ ನೋಟಗಳನ್ನು ಇಟ್ಟು ಕೊಂಡು ಪುರುಷ ಹೆಣ್ಣಿನ ಜಗತ್ತನ್ನು ಹೇಗೆ ಕಂಡಿದ್ದಾನೆ. ಹೆಣ್ಣು ಪುರುಷ ಪ್ರಧಾನ ನೆಲೆಯ ಒತ್ತಡಗಳಲ್ಲಿ ಹೇಗೆ ಕರಗಿ ಹೋಗಿದ್ದಾಳೆ ಎಂಬುದನ್ನು ಒಂದು ನಿರ್ದಿಷ್ಟ ಸಾಹಿತ್ಯ ಕೃತಿಯ ಮೂಲಕ ನೋಡುವುದು ಮುಂದಿನ ಚರ್ಚೆಯ ಉದ್ದೇಶವಾಗಿದೆ. ಅದಕ್ಕಾಗಿ ಕುಮಾರ ವ್ಯಾಸನ '' ಕರ್ನಾಟಕ ಭಾರತ ಕಥಾ ಮಂಜರಿ '' ಯನ್ನು ಆಯ್ಕೆ ಮಾಡಿ ಕೊಳ್ಳಲಾಗಿದೆ.

# ಅಧ್ಯಾಯ — 2

## ಕುಮಾರವ್ಯಾಸ ಭಾರತ ಕುರಿತು ಇದುವರೆಗಿನ ವಿಮರ್ಶೆ

ಕುಮಾರವ್ಯಾಸ ಭಾರತ ಕುರಿತು ಇದುವರೆಗಿನ ವಿಮರ್ಶೆ

ಸುಮಾರು ಈ ಶತಮಾನದ ಆರಂಭದಿಂದಲೂ ಅನೇಕರು ಕುಮಾರವ್ಯಾಸ ಭಾರತದ ರಸಾಸ್ವಾದನೆಯನ್ನು ಸಾಧಿಸಲು ಪ್ರಯತ್ನಿಸಿದ್ದಾರೆ. ಇಲ್ಲಿಯ ತನಕ ಆ ರೀತಿಯ ವಿಮರ್ಶೆ ರೂಪದ ಲೇಖನಗಳು, ಪುಸ್ತಕಗಳು ಸುಮಾರು ಐವತ್ತನ್ನು ಮೀರುತ್ತದೆ. ಕುಮಾರವ್ಯಾಸನ ಬಗೆಗಿನ ಇಲ್ಲಿಯವರೆಗಿನ ವಿಮರ್ಶೆಯನ್ನು ವಿವರಣಾತ್ಮಕ ರಸವಾದಿ ವಿಮರ್ಶೆ ಮತ್ತು ನಿರ್ದಿಷ್ಟ ವಿಮರ್ಶೆಯ ಮಾನದಂಡಗಳ ಪರಿಕಲ್ಪನಾತ್ಮಕ ವಿಮರ್ಶೆ ಎಂದು ವಿಂಗಡಿಸಬಹುದಾದರೂ ಸ್ತ್ರೀವಾದಿ ಅಧ್ಯಯನ ದೃಷ್ಟಿಯಿಂದ ಇದು ಪ್ರಯೋಜನ ಆಗಲಾರದು. ಯಾಕೆಂದರೆ ಕುಮಾರವ್ಯಾಸ ಭಾರತದ ಬಗ್ಗೆ ಬಂದಿರುವ ಪಿ.ಎಚ್.ಡಿ. ಪ್ರಬಂಧಗಳೂ ಸೇರಿದಂತೆ ನಮ್ಮ ವಿಮರ್ಶಕ, ವಿಮರ್ಶಕಿಯರು ಬರೆದ ಯಾವುದೇ ಲೇಖನ ಸ್ತ್ರೀಯನ್ನು ಮುಖ್ಯವಾಗಿಟ್ಟುಕೊಂಡು ನಡೆಸಿದ ಚರ್ಚೆಯಾಗಿಲ್ಲ. ಸ್ತ್ರೀ ಪಾತ್ರವೊಂದರ ಬಗ್ಗೆ ಮಾತನಾಡುವಾಗಲೂ ಸಹ ಸ್ತ್ರೀತ್ವದ ನೆಲೆಗಳು ಇಲ್ಲಿನ ಯಾವ ವಿಮರ್ಶೆಗೂ ಒದಗಿ ಬಂದಿಲ್ಲ. ಸ್ತ್ರೀಯ ಬದುಕು ಪುರುಷರ ಬದುಕಿನ ಮೌಲ್ಯಗಳಷ್ಟೇ ಸಮಾನ ನೆಲೆಯಲ್ಲಿ ಭಾವಿಸಬೇಕಾದ ಒತ್ತಡಗಳನ್ನಿಟ್ಟುಕೊಂಡು ಕುಮಾರವ್ಯಾಸನ ಭಾರತವನ್ನು ಓದಿದರೆ, ಯಾರಿಗೆ ಆದರೂ ಈ ಅಂಶ ಸ್ಪಷ್ಟವಾಗುತ್ತದೆ.

ಕುಮಾರವ್ಯಾಸನ ಕುರಿತ ಬಹಳ ಮುಖ್ಯವಾದ ವಿಮರ್ಶೆಗಳಲ್ಲಿ ಡಾ: ಎಲ್. ಆರ್. ಹೆಗಡೆಯವರ 'ಕುಮಾರವ್ಯಾಸನ ಪಾತ್ರ ಸೃಷ್ಟಿ' ಒಂದು. ಕುಮಾರವ್ಯಾಸ ಭಾರತದ ಪಾತ್ರಗಳನ್ನು ವ್ಯಾಸ ಭಾರತದ ಹಿನ್ನೆಲೆಯಲ್ಲಿ ಒಟ್ಟೊಟ್ಟಿಗೆ ಚರ್ಚಿಸುವ ಈ ನಿಬಂಧ ಕುಮಾರವ್ಯಾಸನ ಕಾವ್ಯ ಸಾಮರ್ಥ್ಯವನ್ನು ಹೇಳುವ ಉದ್ದೇಶವನ್ನು ಮುಖ್ಯ ಮಾಡಿಕೊಂಡಿದ್ದಾಗಿದೆ. ಮತ್ತು ಇಂಥ ಅಧ್ಯಯನಕ್ಕಾಗಿ ಮನೋವೈಜ್ಞಾನಿಕ ಶಿಸ್ತನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಇದು ಪಾತ್ರಗಳನ್ನು ಗಮನಿಸುವ, ಹೊಸ ದೃಷ್ಟಿಕೋನ ಆಗಿರುವಂತೆ ಅದರ ಮಿತಿಯೂ ಆಗಿದೆ. ಯಾಕೆಂದರೆ ಪಾತ್ರಗಳ ಅಸ್ತಿತ್ವದ ಪ್ರಶ್ನೆಯ ಮೂಲಕ ಚರ್ಚಿಸಬಹುದಾದ ಸಾಂಸ್ಕೃತಿಕ ಆಯಾಮಗಳು ಇಲ್ಲಿ ಮರೆಯಾಗಿವೆ. ಸ್ತ್ರೀ ಪಾತ್ರಗಳಂತೂ ಪುರುಷ ಪಾತ್ರಗಳ ಔನ್ನತ್ಯದಲ್ಲಿ ಕರಗಿಹೋಗಿವೆ. ಈ ಉದಾಹರಣೆಗಳನ್ನು ಗಮನಿಸಿ,

"ಅರ್ಜುನನು ಮೂರು ಲೋಕದ ಗಂಡ! ಊರ್ವಶಿ ಮೂರು ಲೋಕದ ಹೆಣ್ಣು! ಎಂಥ

ಸನ್ನಿವೇಶ! ಅರ್ಜುನನು ಮನೋ ನಿಗ್ರಹದಿಂದ ಮನೋಜನನ್ನು ಜಯಿಸಿ, ಸ್ವರ್ಗವನ್ನು ಗೆದ್ದನು. ಅರ್ಜುನನ ಜಿತೇಂದ್ರಿಯತ್ವವು ಈ ಅಗ್ನಿದಿವ್ಯದಲ್ಲಿ ಹಾದು ಬಂದು ದಿವ್ಯವಾಗಿ ಬೆಳಗುತ್ತದೆ" (ಪುಟ 77)

"ಆದರ್ಶ ಗೃಹಿಣಿಯ ಪಾತ್ರ ಚಿತ್ರಣದಲ್ಲಿ ಇವರು ಪುರುಷರೊಡನೆ ಒತ್ತು ಬಾಳಿದ ಸ್ತ್ರೀಯರ ಚರಿತ್ರೆಯನ್ನು ನೀಡಿ, ಮನೋವಿಜ್ಞಾನಿಗಳಾದ ವ್ಯಾಸರು ವಿಶಿಷ್ಟ ಸ್ತ್ರೀ ಪ್ರಕೃತಿಯ ರಹಸ್ಯದ ಕಡೆಗೆ ಹಸ್ತ ನಿರ್ದೇಶನ ಮಾಡಿದರು. (ಪುಟ 311).

" ದಾಶರಾಜನ ಮನೆಯಲ್ಲಿ ಬೆಳೆದ ಪರಿಸರದ ಪ್ರಭಾವದಿಂದಲೂ ಅವಳ ತಂದೆ (ಉಪರಿಚರವಸು)ಯ ಅಪ್ಸರೆಯ ಮೋಹದ ಮೂಲಕ ಜನ್ಮ ತಳೆದ ಅನುವಂಶಿಕತೆಯ ಪರಿಣಾಮವಾಗಿಯೂ ನೀತಿ ವಿಚಾರವನ್ನು ಅಷ್ಟಾಗಿ ತಲೆಗೆ ಹಚ್ಚಿಕೊಂಡವಳಲ್ಲ. ಆದ್ದರಿಂದ ಅನಿವಾರ್ಯ ಪರಿಸ್ಥಿತಿಯಲ್ಲಿ ಭೀಷ್ಮರು ಪ್ರತಿಜ್ಞೆಯನ್ನು ತ್ಯಜಿಸಿ, ವಿಚಿತ್ರವೀರ್ಯನ ಕ್ಷೇತ್ರದಲ್ಲಿ ಪ್ರಜೋತ್ಪತ್ತಿಯನ್ನು ಮಾಡಬೇಕೆಂದು ಒತ್ತಾಯಿಸಿದಳು. ವಿವಾಹ ಪೂರ್ವದಲ್ಲಿ ಒಮ್ಮೆ ಕೌಮಾರ್ಯ ಭಂಗವಾದರೂ ಅದು ಆಗದಿದ್ದರೆ ಹೇಗೆಯೋ ಹಾಗೆಯೇ ನಡೆದುಕೊಂಡು ಕೀರ್ತಿವಂತಳಾದಳು. (ಪುಟ 199).

ಸ್ತ್ರೀ ಕುರಿತಾದ ಇಂಥ ಅನೇಕ ವ್ಯಾಖ್ಯಾನಗಳನ್ನು ಈ ಕೃತಿಯಲ್ಲಿ ಗಮನಿಸಬಹುದು. ಮನೋವೈಜ್ಞಾನಿಕ ನೆಲೆಯಿಂದ ಪಾತ್ರಗಳನ್ನು ವಿಶ್ಲೇಷಿಸುವುದು ಒಂದು ಹೊಸ ಆಯಾಮವನ್ನು ಬಿಚ್ಚುವುದೇ ಆದರೂ ಹಾಗೆ ಮಾಡುವಾಗ ಒಂದು ಪಾತ್ರಕ್ಕೆ ಇರಬಹುದಾದ ಸಾಮಾಜಿಕ ಸಾಂಸ್ಕೃತಿಕ ಅಸ್ತಿತ್ವ ಕವಿಯ ಸೃಷ್ಟಿ ಕ್ರಿಯೆಯಲ್ಲಿಯೇ ಯಾವ ರೂಪ ಪಡೆದಿದೆ? ಅದರ ಹಿಂದೆ ಇರಬಹುದಾದ ಒತ್ತಡ ಎಂತಹುದು?. ಎಂಬುದನ್ನು ವಿಶ್ಲೇಷಿಸುವುದೂ ಅಷ್ಟೇ ಮುಖ್ಯವಾಗಿರುತ್ತದೆ. ಬಹಳ ಮುಖ್ಯವಾಗಿ ಗಂಡು ಪಾತ್ರಗಳನ್ನು ನೋಡುವಲ್ಲಿನ ಕವಿಯ ದೃಷ್ಟಿಕೋನ. ಹೊಸ ಪಾತ್ರಗಳನ್ನು ನೋಡುವಲ್ಲಿನ ಕವಿಯ ದೃಷ್ಟಿಕೋನ ಮತ್ತು ಅಲ್ಲಿನ ಗಂಡು ಪಾತ್ರಗಳೇ ಹೆಣ್ಣು ಪಾತ್ರಗಳ ಬಗ್ಗೆ ಹೇಗೆ ನಡೆದು ಕೊಳ್ಳುತ್ತವೆ? ಹೆಣ್ಣು ಪಾತ್ರಗಳ ನಡುವೆಯೇ ಇರಬಹುದಾದ ಸಂಬಂಧಾಂತರಗಳು ಎಂಥವು? ಇವುಗಳ ವ್ಯತ್ಯಾಸಗಳನ್ನು ಗ್ರಹಿಸದೇ ಹೋದರೆ ಮನುಷ್ಯನ ಚಾರಿತ್ರಿಕ ವಾಸ್ತವಗಳನ್ನು ಮುಖ್ಯವಾಗಿ ಗಂಡು ಹೆಣ್ಣಿನ ಸಂಬಂಧಗಳ ಹಿಂದಿರುವ ವಾಸ್ತವವನ್ನು ಬಿಚ್ಚಿ ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದಲೇ ಇಂಥ ವಿಮರ್ಶೆಗಳು ಕಾರ್ಯ ಸಾಹಸಗಳಿಂದ ರಮಣಿಯನ್ನು ಗೆದ್ದು ವಿವಾಹವಾಗುವ ಅರ್ಜುನನನ್ನು ಹೊಗಳುತ್ತವೆ. (ಪುಟ 34) ಊರ್ವಶಿಯನ್ನು ತಿರಸ್ಕರಿಸಿದಾಗ ಆತನ ಶ್ರೇಷ್ಠಗುಣವನ್ನು ವ್ಯಾಖ್ಯಾನಿಸುತ್ತವೆ.

ಹಿರಿಯಳಾದವಳು ಸರಿಯಾಗಿ ನಡೆದು ಮಕ್ಕಳಿಗೆ ದಾರಿ ತೋರಬೇಡವೇ ( ಪುಟ 77 ) ಶಂತನನ್ನು ಮದುವೆಯಾದ ಸತ್ಯವತಿಯಲ್ಲಿ ಅಪರಾಧಿ ಭಾವವನ್ನು ಗುರ್ತಿಸುತ್ತವೆ. (ಪುಟ 200)ಗಂಡಸರಿಗಿಂತಲೂ ಹೆಂಗಸರಿಗೆ ಮಕ್ಕಳ ಬಯಕೆ ಅಧಿಕವಾಗುವುದರಿಂದ ಕುಂತಿ ಪುತ್ರರಿಲ್ಲವೆಂದು ಕೊರಗುವದು ತುಂಬ ಸಹಜವಾದುದು (ಪುಟ 204) ಎಂದು ವರ್ಣಿಸುತ್ತವೆ. ಕುಂತಿಗೆ ಮೊದಲೇ ಪುತ್ರ ಜನನವಾಯಿತೆಂದು ಕೇಳಿ ಗಾಂಧಾರಿ ಹೊಟ್ಟೆ ಹೊಸೆದುಕೊಳ್ಳುವುದನ್ನು ಸಾಮಾನ್ಯ ಸ್ತ್ರೀ ಪ್ರಭಾವದ ವಾಸ್ತವಿಕ ಮನೋ-ಭೂಮಿಕೆಯನ್ನು ಸ್ಪಷ್ಟ ಮಾಡಿದ್ದಾರೆ. (ಪುಟ 207) ಎಂದು ಆಕೆ ಕಣ್ಣಿಗೆ ಬಟ್ಟೆ ಕಟ್ಟಿಕೊಂಡಿದ್ದಕ್ಕೆ '' ಗಾಂಧಾರಿಯ ಪಾತಿವ್ರತ್ಯವನ್ನು ಪತಿ ಪ್ರೇಮವನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ'' (ಪುಟ 208) ಎಂದು ಹೇಳುತ್ತವೆ. ಆದರೆ ಈ ಎಲ್ಲಾ ಪ್ರಕ್ರಿಯೆಗಳ ಹಿಂದೆ ಇರಬಹುದಾದ ಪುರುಷ ನಿಷ್ಠ ನೆಲೆಗಳನ್ನು ಗುರ್ತಿಸಲು ಇಂಥ ಸಿದ್ಧ ಮಾದರಿಯ ವಿಮರ್ಶೆಗಳಿಗೆ ಸಾಧ್ಯವಾಗುವುದಿಲ್ಲ. ಆದಕಾ-ಗಿಯೇ ಇವರಿಗೆ ಐದು ಜನಗಳ ಹೆಂಡತಿಯಾಗಿ ಬದುಕಬೇಕಾದ ಒತ್ತಡಕ್ಕೆ ಬಲಿಯಾದ ದ್ರೌಪದಿ ' ವಿಶಿಷ್ಟ ಪ್ರಕೃತಿಯಾಗಿ ಕಾಣುತ್ತಾಳೆ'.

ಎಸ್. ಬಿ. ಪ್ರಭಾವತಿಯವರ ' ಕನ್ನಡ ಸಾಹಿತ್ಯದಲ್ಲಿ ದ್ರೌಪದಿ ' ಸಹ ಇದಕ್ಕಿಂತ ಭಿನ್ನವಾಗಿ ಮಾತನಾಡಲು ಸಾಧ್ಯವಾಗದಿರುವುದು ಇಂಥ ಪುರುಷನಿಷ್ಠ ಮಾದರಿಗಳ ಒತ್ತಡವೇ ಆಗಿದೆ. ಅವರು ದ್ರೌಪದಿಯ ಬಗ್ಗೆ ಮಾತನಾಡುತ್ತ '' ಅವಳಿಗೆ ಸಾಂಸಾರಿಕ ವಾತ್ಸಲ್ಯಕ್ಕಿಂತ ಗಂಡಸಿನಂತೆ ಛಲ ಸಾಧಿಸುವುದೇ ಮುಖ್ಯವಾಗಿತ್ತೆನಿಸುತ್ತದೆ.'' ಎಂಬ ಅಭಿಪ್ರಾಯ ತಲುಪುತ್ತಾರೆ. ಆಕೆ ಐದು ಜನರ ಸತಿಯಾಗುವ ಹಿಂದಿರುವ ಒತ್ತಡಗಳಾಗಲಿ, ಕೃಷ್ಣನಿಂದಾದ ಅಕ್ಷಯ ವಸ್ತ್ರ ಪ್ರಸಂಗ ಪುರುಷನ ಪರಿಪೂರ್ಣ ವ್ಯಕ್ತಿತ್ವದ ಪ್ರಕಟಣೆಯ ದರ್ಪವೆಂದಾಗಲಿ, ಇಡೀ ಮಹಾಭಾರತದಲ್ಲಿ ದ್ರೌಪದಿಯನ್ನು ಆಸ್ತಿಯಂತೆ ನಡೆಸಿಕೊಳ್ಳುವ ಪುರುಷನ ಆಕ್ರಮಣ ಪ್ರವೃತ್ತಿಯೆಂದಾಗಲೀ ಎನಿಸುವುದಿಲ್ಲ. ಲೇಖಕಿ ಹೇಳುವಂತೆ ಛಲ ಸಾಧಿಸುವುದೇ ದ್ರೌಪದಿಯ ಮುಖ್ಯ ಗುಣವೆಂದಾದರೆ ಆಕೆ ಮೊದಲಿಗೆ ತನ್ನ ಗಂಡಂದಿರ ಮೇಲೆ ಅದರಲ್ಲೂ ಧರ್ಮರಾಯ ಮತ್ತು ಅರ್ಜುನರ ಮೇಲೆಯೇ ಛಲ ಸಾಧಿಸಬೇಕಾದದ್ದು ಎನಿಸುವುದಿಲ್ಲ ಯಾಕೆ?

ಸೇಡಿನ ಭಾವನೆಯಿಂದ ನಡೆದ ಯಾಗ ಕುಂಡದಲ್ಲಿ. ಹುಟ್ಟಿದ ದ್ರೌಪದಿ ಮುಂದೆ ಸೇಡನ್ನೇ ಜೀವನದ ಮುಖ್ಯ ಸೂತ್ರವಾಗಿ ಹಿಡಿಯುತ್ತಾಳೆ.(ಪುಟ 6)

ಎಂದು ದ್ರುಪದನ ಸೇಡನ್ನು ದ್ರೌಪದಿಯ ಸೇಡನ್ನಾಗಿ ವ್ಯಾಖ್ಯಾನಿಸುವುದು ವಸ್ತ್ರಾಪಹರಣ ಸಾಧ್ಯವಾಗದೇ ಅಪೂರ್ಣವಾದುದನ್ನು ವಿಶ್ಲೇಷಿಸುತ್ತ '' ಒಟ್ಟಿನಲ್ಲಿ ಹೇಗೂ ದ್ರೌಪದಿಯ ತನ್ಮೂಲಕ ಭಾರತೀಯ ಸಂಸ್ಕೃತಿಯ ಮಾನ ಉಳಿಯಿತು. ಎಂದು ಸಮಾಧಾನ ಪಡಬಹುದು '' ಎಂಬ ಅಭಿಪ್ರಾಯ.

'' ಪಾಂಡವರು ಕಾಡಿಗೆ ಹೋದ ಹೊಸದರಲ್ಲಿ ಕೃಷ್ಣನು ಅವರನ್ನು ಭೇಟಿ ಮಾಡಲು ಬಂದಾಗ, ದ್ರೌಪದಿ ತನಗಾದ ಪರಿಭವವೆಲ್ಲವನ್ನು ಅವನ ಮುಂದೆ ಹೇಳಿ ಕೊಳ್ಳುತ್ತಾಳೆ. ಆದರೆ ಅವನ ಕೃಪೆಯಿಂದ ತನ್ನ ಮಾನ ಉಳಿಯಿತೆಂದು ಹೇಳುವುದೇ ಇಲ್ಲ'' (ಪುಟ 21)

'' ಒಟ್ಟಿನಲ್ಲಿ ಕೀಚಕನಲ್ಲಿ ಕಾಮೋದ್ರೇಕವನ್ನು ಉಂಟು ಮಾಡಿದ, ಅವನ ವಧೆಗೆ ಕಾರಣವಾದ ದ್ರೌಪದಿ ವಿರಾಟಪರ್ವದ ಕೇಂದ್ರ ಬಿಂದು'' (ಪುಟ–22)

ದ್ರೌಪದಿಗೇನಾದರೂ ಭವಿಷ್ಯ ದೃಷ್ಟಿ ಇದ್ದಿದ್ದರೆ, ಮಹಾಭಾರತದ ಕಥೆಯೇ ಬೇರೆಯಾಗುತ್ತಿತ್ತು. ಅವಳಿಗೆ ಸೇಡು ತೀರಿಸಿ ಕೊಳ್ಳುವುದು ಮುಖ್ಯ ಭೀಮನಿಗೆ ಪ್ರತಿಜ್ಞಾಪಾಲನೆ ಮುಖ್ಯ ಇದನ್ನರಿತ ಕೃಷ್ಣನು ಕಾಳಗವನ್ನೇ ಬಯಸುಬಹನು ಎಂದಿರುವದು ಸಹಜವಾಗಿದೆ'' (ಪುಟ 111)

ಈ ಎಲ್ಲ ಮಾತುಗಳು ಪುರುಷ ಕೇಂದ್ರಿತ ನೆಲೆಯಿಂದ ಹೊರಟವೆ ಹೊರತೂ ಆಯಾಯ ಸಂದರ್ಭಗಳು ಸೃಷ್ಟಿಯಾದ ಕಾರಣಗಳನ್ನು ಮತ್ತು ಅವುಗಳ ಹಿನ್ನಲೆಯನ್ನು ಗ್ರಹಿಸಲು ಪ್ರಯತ್ನಿ– ಸುವುದಿಲ್ಲ. ಆದ್ದರಿಂದಾಗಿ ಈ ಕೃತಿ ಕವಿ ಅಥವಾ ಕವಿಯ ಪಾತ್ರಗಳು ಮಾತನಾಡುವ ಪುರುಷ ನಿಷ್ಠ ಪರಿಭಾಷೆಯಲ್ಲಿಯೇ ಇದೆ, ಇದರೊಂದಿಗೆ ಆ ಇಂಥ ವಿಮರ್ಶೆಯ ಮಾನದಂಡಗಳೂ ಸೇರಿರುವುದರಿಂದ ಸ್ತ್ರೀವಾದಿ ಚಿಂತೆ ನೆಯ ಯಾವ ಗುಣಗಳೂ ಇಲ್ಲ ಮುಖ್ಯವಾಗುವುದಿಲ್ಲ. '' ಅಣ್ಣ ತಮ್ಮಂದಿರಲ್ಲಿ ಪರಸ್ಪರ ವೈಷಮ್ಯ ಮೂಡದೆ ಅವರ ವಿಶ್ವಾಸ ಗಾಢವಾದುದಕ್ಕೆ ಅನೇಕ ವಿಮರ್ಶಕರು ದ್ರೌಪದಿಯನ್ನು ಹೊಗಳಿದ್ದಾರೆ. ಆದರ್ಶ ಪತ್ನಿಯಾಗಿಸಿದ್ದಾರೆ'' (ಪುಟ11) ಎಂದು ಹಿಂದಿನ ವಿಮರ್ಶೆಗಳ ಮಿತಿಯನ್ನು ಗುರುತಿಸುವ ಪ್ರಭಾವತಿಯವರ ಮಾತು ಅವರ ಇಡೀ ಪ್ರಬಂಧದಲ್ಲಿ ಸ್ತ್ರೀವಾದಿ ನೆಲೆಯಿಂದ ಭಿನ್ನವಾದ ಅಂಶಗಳನ್ನು ಗುರ್ತಿಸಲು ಸಾಧ್ಯವಾಗಿಲ್ಲದಿರುವುದು ಈ ಸಂಶೋಧನ ಕೃತಿಯದೊಡ್ಡ ಮಿತಿ ಆದ್ದರಿಂದ ದ್ರೌಪದಿಯ ಪಾತ್ರದ ಪುನರ್ ವ್ಯಾಖ್ಯಾನದ ಅಗತ್ಯ ಕಾಣುತ್ತದೆ.

ಈ ದೃಷ್ಟಿಯಿಂದಲೇ ಕೃಷ್ಣನ ಮಹತ್ವವನ್ನು ವಿವರಿಸುವ ಕುರ್ತಕೋಟಿಯವರ
'' ಕುಮಾರವ್ಯಾಸ '' ಕೃತಿಯನ್ನು ಗಮನಿಸಬೇಕು ಉಳಿದೆಲ್ಲ ಪಾತ್ರಗಳನ್ನು ಕೃಷ್ಣನಿಗೆ
ಅಧೀನವಾಗಿಸಿ ಕೊಂಡು ಅವನ ಪುರುಷೋತ್ತಮ ಚಾಣಾಕ್ಷತನವನ್ನು ವೈಭವೀಕರಿಸಿದೆ. ಅವನ
ಅತಿಮಾನುಷ ವ್ಯಕ್ತಿತ್ವವನ್ನು ' ಚತುರ, ನಿಪುಣ, ಪರಿಭಾಷೆಯಿಂದ ವಿವರಿಸುವಲ್ಲಿಯೇ ಈ ಅಂಶ
ಕಾಣುತ್ತದೆ.

''ಕೆ.ವಿ.ಶ್ರೀನಿವಾಸ ಮೂರ್ತಿಯವರ '' ಕುಮಾರವ್ಯಾಸ ಮತ್ತು ಕರ್ನಾಟಕ ಭಾರತ
ಕಥಾ ಮಂಜರಿ, ಒಂದು ವಿಮರ್ಶಾತ್ಮಕ ಅಧ್ಯಯನ '' ಪಿ.ಎಚ್.ಡಿ. ನಿಬಂಧ ಸಹ ಈ ದೃಷ್ಟಿಯಿಂದ
ಯಾವ ಒಳನೋಟಗಳನ್ನೂ ನೀಡುವುದಿಲ್ಲ. ಸಾಂಪ್ರದಾಯಿಕ (ಪುರುಷ ಪ್ರಧಾನ) ಗ್ರಹಿಕೆಯನ್ನೇ
ವಿಸ್ತರಿಸುವ ಈ ನಿಬಂಧ ಶ್ರೀ ಕೃಷ್ಣನ ಅತಿಮಾನುಷ ವ್ಯಕ್ತಿತ್ವವನ್ನು ದೈವಿಕ ನೆಲೆಯಲ್ಲಿ ಒಪ್ಪಿ
ಕೊಂಡಿರುವುದಲ್ಲದೆ ಉಳಿದ ಪಾತ್ರಗಳ ಅಧ್ಯಯನಕ್ಕೆ ಮಿತಿಯನ್ನು ಹಾಕಿ ಕೊಂಡಂತಾಗಿದೆ. ಮತ್ತು ಆ ಪಾತ್ರಗಳ ಅಸ್ತಿತ್ವವನ್ನು ಆಲೋಚಿಸುವುದೂ
ಇಲ್ಲ ಅಸಾಧ್ಯವಾಗಿಯೇ ಕಂಡಿದೆ. ಸ್ತ್ರೀ ಪಾತ್ರಗಳಂತೂ, ಈ ಪುರುಷೋತ್ತಮನ
ವ್ಯಾಖ್ಯಾನಗಳೊಳಗೆ ಮರೆಯಾಗಿ ಬಿಟ್ಟಿದೆ. ಲೇಖಕರು '' ಪಂಪ, ಭಾರತದಲ್ಲಿ ಕೆಲವು ಪಾತ್ರಗಳಿಗೆ ಮಾತ್ರವೇ
ಪ್ರಾಶಸ್ತ್ಯ ದೊರೆತಿದ್ದರೆ, ಕುಮಾರವ್ಯಾಸ ಭಾರತದಲ್ಲಿ ಎಲ್ಲ ಪಾತ್ರಗಳಿಗೂ ಪ್ರಾಶಸ್ತ್ಯವಿದೆ.
ಹೀಗೆ ಕುಮಾರವ್ಯಾಸನನ್ನು ವ್ಯಾಖ್ಯಾನಿಸುವುದೇ . ಕುಮಾರವ್ಯಾಸನ ಕರ್ನಾಟಕ ಭಾರತ ಕಥಾ
ಮಂಜರಿಯನ್ನು ವ್ಯಾಖ್ಯಾನಿಸಿದಂತೆ, ಎಂದು ತಿಳಿದಿರುವುದೇ ಈ ಕೃತಿಯ ಮಿತಿ.

'' ಸಿ.ವೀರಣ್ಣನವರ ಕನ್ನಡ ಕಾವ್ಯ ಮತ್ತು ಹೆಣ್ಣು '' ಸಂಶೋಧನ ಗ್ರಂಥ ಪ್ರಮುಖ
ಕಾವ್ಯಗಳಲ್ಲಿನ ಮುಖ್ಯ ಪ್ರಸಂಗಗಳನ್ನು ದಾಖಲಿಸುವ ಮುಖ್ಯ ಕೃತಿಯಾಗಿದೆ, ಆದರೂ ಈ
ಮೇಲಿನ ಕೃತಿಗಳಿಗಿರುವ ಮಿತಿಯೇ ಇದರದಲ್ಲಾ ಎಂದರೆ ಅತಿಶಯೋಕ್ತಿ ಅಲ್ಲ, ಕುಮಾರವ್ಯಾಸನ
ದ್ರೌಪದಿಯನ್ನು ಕುರಿತ ಪ್ರಸಂಗಗಳನ್ನು ದಾಖಲಿಸಿರುವ ಈ ಕೃತಿ '' ಅವನು ಸಾಮಾನ್ಯರೊಡನೆ
ಬದುಕಿದ್ದ ಕವಿ ಆದ್ದರಿಂದ ಮೇಲ್ವರ್ಗಕ್ಕಿಂತ ಸಾಮಾನ್ಯ ವರ್ಗದಲ್ಲಿ ಹೆಣ್ಣಿಗೆ ಗುಂಡಿಗೆ ಜಾಸ್ತಿ
ಎಂಬುದನ್ನು ಕಂಡಿದ್ದ ಕವಿ. ದ್ರೌಪದಿಯನ್ನು ಅದೇ ರೀತಿಯಲ್ಲಿ ಚಿತ್ರಿಸಿದ್ದಾನೆ '' ಎಂದು
ವ್ಯಾಖ್ಯಾನಿಸಿದೆ.

ಬಿಡಿ ಪ್ರಸಂಗಗಳನ್ನು ಕುರಿತಂತೆ ಬಂದಿರುವ ಕೆಲವು ಲೇಖನಗಳು ಗಮನಾರ್ಹವಾಗಿವೆ. ಜಿ.ಎಸ್.ಎಸ್.ರವರ '' ಅಕ್ಷಯ ವಸ್ತ್ರ ಪ್ರಸಂಗ '' ಎಂಬ ದೀರ್ಘವಾದ ಲೇಖನ ಕೆಲವು ಒಳನೋಟಗಳನ್ನು ಕೊಡಲು ಪ್ರಯತ್ನಿಸಿದೆ. ಗಮನಿಸಿ '' ಕೃಷ್ಣನ ಕೃಪೆಯಿಂದಲೇನೋ ದ್ರೌಪದಿಯ ಮಾನ ಉಳಿಯಿತು ಆದರೆ ಇಡೀ ಸಭೆಯೇ ಇಂಥ ಒಂದು ಅವಮಾನಕರವಾದ ಪ್ರಸಂಗದಲ್ಲಿ ಬಾಯಿ ಮುಚ್ಚಿ ಕುಳಿತಿರುವುದನ್ನು ನೋಡಿದರೆ, ಎಲ್ಲರೂ ದ್ರೌಪದಿಯ ಮಾನ ರಕ್ಷಣೆಯ ಕೀರ್ತಿಯನ್ನು ಆ ಕೃಷ್ಣನಿಗೇ ಕೊಡಬೇಕೆಂದು ಕಾದು ಕುಳಿತಂತೆ ತೋರುವುದಿಲ್ಲವೇ ? ಶ್ರೀ ಕೃಷ್ಣನ ಮಹಿಮಾ ಪ್ರಕಾಶನಕ್ಕೆ ತಮ್ಮದೇಕ ಅಡ್ಡಿ ಎಂದು ಕುಳಿತ ಹಾಗೆಯೂ ದ್ರೌಪದಿಯ ಮಾನ ರಕ್ಷಣೆಯಾಗುತ್ತಲೆ ಸಭಿಕರೆಲ್ಲ ಆಶ್ಚರ್ಯದಿಂದ ಆ ಮುಕುಂದ ಲೀಲೆಯನ್ನು ಕಂಡು ಅದನ್ನು ಹೊಗಳಿ, ನುತಿಸಿದ ಹಾಗೆಯೂ ಕಂಡು ಬರುವುದಿಲ್ಲವೇ ? (ಪುಟ-120 ಪರಿಶೀಲನ) ಎಂಬ ಅನುಮಾನಗಳು ಸ್ತ್ರೀವಾದಿ ಚಿಂತನೆಗೆ ಪೂರಕವಾದ ಸೂಚನೆಗಳನ್ನು ಕೊಡುತ್ತವೆ. ಆದರೂ ಇದು ಸ್ತ್ರೀವಾದಿ ಚಿಂತನೆಯಲ್ಲ. ಪ್ರಕ್ಷೇಪಗಳ ಅಧ್ಯಯನಕ್ಕೆ ಸೀಮಿತವಾದ ಈ ಲೇಖನ ಪ್ರಕ್ಷೇಪಗಳು ಯಾಕೆ ಸೇರಿಕೊಳ್ಳುತ್ತವೆ. ಎನ್ನುವ ಪ್ರಶ್ನೆಯನ್ನು ಹಾಕಿ ಕೊಂಡಾಗ ಮಾತ್ರ ದ್ರೌಪದಿಯಂತಹ ಹೆಣ್ಣಿನ ಆತಂಕಗಳು ಆ ಮೂಲಕ ಸ್ತ್ರೀ ಬದುಕಿನ ಚರಿತ್ರೆಯನ್ನೇ ಕಟ್ಟಿ ಕೊಳ್ಳಲು ಸಾಧ್ಯವಾಗ ಬಹುದು. ಮುಂದುವರಿದು '' ದ್ರೌಪದಿಗೆ ವಸ್ತ್ರಾಪಹರಣವೇ ಆಗಿರಬೇಕು '' (ಪುಟ-207) ಎಂಬ ಶಂಕೆಯನ್ನು ಜಿ.ಎಸ್.ಎಸ್.ವ್ಯಕ್ತ ಪಡಿಸುವ ಹಿನ್ನೆಲೆಯಲ್ಲಿ ಅಕ್ಷಯ ವಸ್ತ್ರ ಪ್ರಸಂಗವನ್ನು ವಿವೇಚಿಸಿ ಕೊಂಡರೆ, ಪುರುಷನ ಮರ್ಯಾದೆ ಪ್ರಶ್ನೆಯಾಗಿ ಆ ಮೂಲಕ ಹೆಣ್ಣಿನ ಮಾನವನ್ನು ಕಾಪಾ ಪುರುಷೋತ್ತಮ ಲಕ್ಷಣವಾಗಿ ಈ ಪ್ರಸಂಗ ಕಾಣುತ್ತದೆ. ಇದು ಪುರುಷ ಪ್ರಾಧಾನ್ಯತೆಯನ್ನು ಯಾರೂ ಪ್ರಶ್ನಿಸಲಾಗದ ಸ್ಥಿತಿಯೊಂದನ್ನು ಸೃಷ್ಟಿಸಿ ಕೊಳ್ಳುವ ಹುನ್ನಾರದಂತಿದೆ. ಆದ್ದರಿಂದಲೇ ದ್ರೌಪದಿಯ ಮಾನವೀಯ ಪ್ರಶ್ನೆಯನ್ನು ಹಿನ್ನೂಕಿ ಗಂಡಿನ ಹಿಂಸಾ ಪ್ರವೃತ್ತಿ (ದುಶ್ಯಾಸನ,ದುರ್ಯೋಧನ) ಮತ್ತು ಗಂಡಿನ ಕರುಣಾ ಪ್ರವೃತ್ತಿ (ಕೃಷ್ಣ)ಗಳು ಎರಡೂ ಮೇಲುಗೈ ಸಾಧಿಸುತ್ತವೆ.

ಹೆಣ್ಣಿನ ಒಟ್ಟು ಜೀವನ ಸಂದರ್ಭಗಳನ್ನುಗಮನಿಸಿ ಹೇಳುವುದಾದರೆ, ಸಮಾಜದಲ್ಲಿ ಗಂಡು ಹೆಣ್ಣನ್ನು ಹೇಗೆ ನಡೆಸಿ ಕೊಂಡಿದ್ದಾನೆಂದರೆ ಗಂಡಿನ ಎಲ್ಲ ಕೆಲಸಗಳಿಗೂ ಹೆಣ್ಣುಬೇಕು. ಆದರೆ ಈ '' ಬೇಕು '' ಎನ್ನುವ ಗುಟ್ಟು ಹೆಣ್ಣಿಗೆ ಗೊತ್ತಾಗಬಾರದು, ಅಷ್ಟು ಜಾಗರೂಕನಾಗಿ ನಡೆದು ಕೊಂಡಿದ್ದಾನೆ.

ಈ ಅಂಶವನ್ನು ನಮ್ಮ ಇಲ್ಲಿಯವರೆಗಿನ ಬಹಳಷ್ಟು ವಿಮರ್ಶೆಗಳು ಗುರ್ತಿಸಿಕೊಳ್ಳದಿರುವುದು ನಮ್ಮ ಸಾಂಸ್ಕೃತಿಕ ಅಧ್ಯಯನ ಚರಿತ್ರೆಯ ವಿಪರ್ಯಾಸವಾಗಿ ಕಾಣುತ್ತದೆ. ಹಾಗೆ ಮಾಡುವಾಗಲೂ ಶತಮಾನಗಳ ಚರಿತ್ರೆಯಲ್ಲಿ ಅಡಗಿರುವ ಹೆಣ್ಣಿನ ಬಗೆಗಿನ ಗಂಡಿನ ಕರುಣೆ ಮಾತ್ರವೇ ಅವಳ ಅವಮಾನ, ಆತಂಕದ ಸ್ಥಿತಿಗಳಲ್ಲಿ ಮುಂದುವರೆದಿರುವುದು ಕಾಣುತ್ತದೆ. ಮತ್ತು ಈ '' ಕರುಣೆ '' ಎನ್ನುವುದು ಆಕೆಯನ್ನು ಕಾಯುವ ಸಿದ್ಧ ಸ್ಥಿತಿಯೊಂದನ್ನು ಪ್ರಕಟಿಸುತ್ತಲೇ ಬಂದಿದೆ. ಉಳಿದಂತೆ ಹೆಣ್ಣ ನಮ್ಮ ಕವಿ ವಿಮರ್ಶಕರೆಲ್ಲರಿಗೂ ವಿರುದ್ಧ ದೇವತೆಯಾಗಿ, ಸಹನೆಯ ತಾಯಿಯಾಗಿ, ರೌದ್ರರೂಪದ ಶಾಕಿನಿ ಡಾಕಿನಿಯಾಗಿ ಮಾತ್ರ ಕಂಡಿದ್ದಾಳೆ. ಆದಕ್ಕಾಗಿಯೇ ದ್ರೌಪದಿಯ ಕೂದಲು ಶ್ರೀ ಮುಡಿ, ಸಿರಿ ಮುಡಿಯಾಗಿ ಮಾತ್ರ ವರ್ಣಿಸಲ್ಪಡುತ್ತದೆ. ಅದು ಮುಂದೊದಗುವ ಕೇಡಿನ ಪ್ರತೀಕವಾಗಿ ನೋಡಲಾಗುತ್ತದೆ. ಶ್ರೀಮುಡಿ ಎಂದು ಕರೆಯುವುದಕ್ಕೂ ಹೆದರಿಕೆಯಾಗುತ್ತದೆ. ಗಾಂಧಾರಿ ಕಣ್ಣಿಗೆ ಬಟ್ಟೆ ಕಟ್ಟಿಕೊಳ್ಳುವುದು ಪತಿವ್ರತಾತನದ ದ್ಯೋತಕವಾಗುತ್ತದೆ. ನಾಲ್ಕು ಹೆಣ್ಣುಗಳ ಗಂಡನಾ ತನ್ನ ಪ್ರಾಧಾನ್ಯತೆಯನ್ನು ತೋರಿಸಿಕೊಳ್ಳುವ ಅರ್ಜುನ ತಂದೆಯೇ ನೇಮಿಸಿದ ಊರ್ವಶಿಯನ್ನು ತಿರಸ್ಕರಿಸುವುದು ಪ್ರೌಢ ಗುಣವಾಗಿ ಕಾಣುತ್ತದೆ. ಕರ್ಣನ ದುರಂತ ಅವನ ಜನನದಲ್ಲಿ ಅಡಗಿದ್ದು, ಕುಂತಿಯ ಕುಲ ಕಳಂಕದ ವಿಚಾರ ಅವಳ ಸ್ವಾರ್ಥ ಚಿಂತನೆಯಾಗಿ ಮನುಜ ಸಂಕಟವಾಗಿ ಮಾತ್ರ ಕಂಡು ಬರುತ್ತದೆ.

ಕುಮಾರವ್ಯಾಸನ ಅರ್ಜುನ ಊರ್ವಶಿ ಪ್ರಸಂಗ '' ( ಸುಜನಾ)'' ಕುಮಾರ ವ್ಯಾಸನ ಕಂಡರಿಸಿದ ಶ್ರೀ ಕೃಷ್ಣನ ಅತಿಮಾನುಷ ವ್ಯಕ್ತಿತ್ವ '' (ಡಿ.ಲಿಂಗಯ್ಯ)' ಕುಮಾರ ವ್ಯಾಸನ ಭಾರತದ ಹಿರಿಮೆ ( ರಾ.ಶ್ರೀ.ಮುಗಳಿ)' ' ದ್ರೌಪದಿಯ ಶ್ರೀಮುಡಿ ಮತ್ತು ' ಕುಮಾರ ವ್ಯಾಸನ ದುರಂತ ಕರ್ಣ (ಕುವೆಂಪು) ಮೊದಲಾಗಿ ಅನೇಕ ಲೇಖನಗಳನ್ನು ಇಂಥ ವಿಮರ್ಶೆಯ ಉದಾಹರಣೆಯಾಗಿ ಹೇಳ ಬಹುದು. ಈ ಶೀರ್ಷಿಕೆಗಳನ್ನು ಗಮನಿಸಿದರೆ, ನಮ್ಮ ವಿಮರ್ಶಕರು ಕರ್ನಾಟಕ ಭಾರತ ಕಥಾ ಮಂಜರಿಯನ್ನು ಕುಮಾರವ್ಯಾಸ ಭಾರತವಾಗಿಯೇ ಕಂಡಿರುವುದು, ಆ ಮೂಲಕ ಕವಿಯ ಪ್ರತಿಭಾ ಔನ್ನತ್ಯ-ವನ್ನು ಹೊಗಳುವುದರಲ್ಲಿ ನಿರತರಾಗಿದ್ದಾರೆ. ಆದ್ದರಿಂದಲೇ ಈ ಕೃತಿಯೊಳಗಿನ ಅನೇಕ ಸೂಕ್ಷ್ಮಗಳನ್ನು ಗಮನಿಸಲು, ಸಾಧ್ಯವಾಗದಿರುವುದೇ ಈ ವಿಮರ್ಶಕರ ಮಿತಿಯೂ ಆಗಿದೆ. ಭಕ್ತಿ ಪಂಥದ ಉಗಮ ಮತ್ತು ಬೆಳವಣಿಗೆಯ ಹಿನ್ನೆಲೆಯಲ್ಲಿ ಕುಮಾರವ್ಯಾಸನ ಪಾತ್ರಗಳನ್ನು ಭಿನ್ನವಾಗಿ ನೋಡುವ ಎಚ್.ಎಸ್.ರಾಘವೇಂದ್ರರಾವ್‌ರವರ '' ಕುಮಾರ ವ್ಯಾಸನ ಇತರ ಪಾತ್ರಗಳು '' ಲೇಖನ ಈ ಭಾರತದ ಪಾತ್ರಗಳ ಮನುಷ್ಯ ಸ್ವಭಾವವನ್ನು ಕವಿಯ ಭಾಷಾಭಿವ್ಯಕ್ತಿಯ ಪ್ರತಿಭೆಯಲ್ಲಿ ಒಪ್ಪಿಕೊಳ್ಳುತ್ತದೆ

ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಸ್ತ್ರೀ ಪಾತ್ರಗಳ ಬಗೆಗೆ ಮಾತನಾಡುತ್ತ, '' ಹೆಣ್ಣೆಂದರೆ ಭೋಗ ವಸ್ತು. ಧರ್ಮಸಹಚರಿ, ಅವಳನ್ನು ಗಂಡಸರು ಕಾಪಾಡಬೇಕು. ಭಾರತದ ದೇಶದ ನಿತ್ಯ ಜೀವನದ ಹೆಣ್ಣುಗಳೇ ಸಾಹಿತ್ಯದಲ್ಲೂ ಕಾಣುತ್ತಾರೆ. ದ್ರೌಪದಿಯ ವಸ್ತ್ರಾಪಹರಣದಲ್ಲೂ ಗಂಡಸರು ಸುಮ್ಮನಿರುತ್ತಾರೆ. ದ್ರೌಪದಿಯ ಸ್ವಯಂವರದಲ್ಲಿ ರೂಪದಲ್ಲಿ ವರ್ಣನೆ, ಕೀಚಕನ ಪ್ರಸಂಗದಲ್ಲಿ ಭೀಮನ ಅನುನಯ ಮಾಡುವಾಗಿನ ಅವನ ಮಾತನ್ನು ಮರೆತರೆ, ಹೆಣ್ಣು ಎನಿಸುವುದೇ ಇಲ್ಲ. ಉಳಿದವರು ಅಜ್ಜದಳಾಕ್ಷಿ, ನಿತಂಬಿನಿ ಮನ್ಮಥನ ಕೈಗೊಂಬೆಯಾಗಿಸುವುದರಲ್ಲಿ ತೃಪ್ತರಾಗುತ್ತಾರೆ'' ಎಂದು ಸರಿಯಾಗಿಯೇ ವಿವರಿಸುತ್ತಾರೆ. ಆದರೆ ಇವರು '' ಕುಮಾರವ್ಯಾಸನ ಪಾತ್ರ ಪ್ರಪಂಚ, ಮನುಷ್ಯ ಪ್ರದರ್ಶನದ ಕಲೆ, ಭಾವ ಸಂಗ್ರಹಾಲಯ'' ಎನ್ನುವುದನ್ನು ಪುರುಷ ಪ್ರದರ್ಶನದ ಶಾಲೆ, ಪುರುಷಭಾವ ಸಂಗ್ರಹಾಲಯ ಎಂದುಕೊಂಡರೆ ತಪ್ಪಾಗುವುದಿಲ್ಲ. ಈ ಮತತನ್ನು ನಮ್ಮ ಒಟ್ಟು ಸಾಹಿತ್ಯ ಪರಂಪರೆಗೆ ಬಹು ಮಟ್ಟಿಗೆ ಅನ್ವಯಿಸಿ ಹೇಳಬಹುದು.

ಇಷ್ಟೇ ಅಲ್ಲದೆ ಇನ್ನು ಅನೇಕ ವಿಮರ್ಶೆಗಳು ಈ ಕೃತಿಯನ್ನು ಕುರಿತು ಬಂದಿವೆ-ಯಾದರೂ ಕುಮಾರವ್ಯಾಸ ಭಾರತವನ್ನು ಪ್ರವೇಶಿಸಲು ಅಷ್ಟು ಪೂರ್ವ ಸಿದ್ಧತೆಯನ್ನು ಒದಗಿಸುತ್ತವೆ ಅಷ್ಟೆ. ಬಹಳ ಮಟ್ಟಿಗೆ ಕವಿಯ ಔನ್ನತ್ಯವನ್ನು ಮೆರೆಯುವ ಈ ಲೇಖನಗಳು 'ಏಕಮುಖ ಚಿಂತನೆಯ ಪ್ರಸಂಗದಲ್ಲಿ ವಿವರಣಾತ್ಮಕ ಚರ್ಚೆಯನ್ನು ಒಳಗೊಂಡಿವೆ. ಹೀಗಿರುವಾಗಲೂ ಪ್ರಾಸಂಗಿಕವಾಗಿ ಕುಮಾರವ್ಯಾಸ ಭಾರತದ ಸ್ತ್ರೀ ಪಾತ್ರಗಳ ಅಧ್ಯಯನದ ಅಗತ್ಯಕ್ಕೆ ಪೂರಕವಾದ ಕೆಲವು ಸೂಚನೆಗಳನ್ನು ನೀಡುತ್ತವೆ.



'' ದ್ರೌಪದಿಯ ವಸ್ತ್ರಾಪಹರಣ ಯತ್ನದ ಪ್ರಸಂಗವನ್ನು ಅಕ್ಷಯ ವಸ್ತ್ರ ಪ್ರಸಂಗವೆಂದು ಕರೆಯುವುದು ರೂಢಿ; ಇದಕ್ಕೆ ಕಾರಣ ಅದು ಬಾಯಿಂದಲೂ ಹೇಳಲು ಲಜ್ಜೆವೆನಿಸುವಂತ ಕೃತ್ಯ ಎನ್ನುವುದು ಒಂದು. ಜೊತೆಗೆ ಕೃಷ್ಣನ ಮಹಿಮೆಯಿಂದ ದ್ರೌಪದಿಯ ವಸ್ತ್ರ ಅಕ್ಷಯವಾಗಿ ಬೆಳೆದು ಅವರ ಮಾನರಕ್ಷಣೆಯಾಯಿತು ಎಂಬ ಕಥೆ ಇನ್ನೊಂದು'' ( ` : ಕುಮಾರವ್ಯಾಸ ಭಾರತದಲ್ಲಿ ಅಕ್ಷಯ ವಸ್ತ್ರ ಪ್ರಸಂಗ : ವಿವೇಚನೆ : ಲಕ್ಷ್ಮೀನಾರಾಯಣ ಭಟ್ಟ).

'' ಹಾಗೆ ನೋಡಿದರೆ, ಕವಿಯ ಹೃದಯದ ಕರೆಯೇ ದ್ರೌಪದಿಯ ಪಾತ್ರವನ್ನು ನಿಮಿತ್ತವನ್ನಾಗಿಸಿಕೊಂಡು ವೀರನಾರಾಯಣನ ಅಡಿಗಳಿಗೆ ಹರಿದಂತೆ ತೋರುತ್ತದೆ'' (ಅಕ್ಷಯ ವಸ್ತ್ರ ಪರಿಶೀಲನೆ: ಜಿ. ಎಸ್. ಎಸ್. ).

ಇಂದ್ರನೇ ಊರ್ವಶಿಯನ್ನು ಕಳಿಸಿದ್ದಕ್ಕೆ ಅರ್ಜುನನಿಗೆ ಒದಗಿದ ಶಾಪವನ್ನು ವರವಾಗಿ, ಅದಕ್ಕೆ ಇನ್ನೊಂದು ತಿರುವು ಕೊಡುತ್ತಾನೆ'' (ಕುಮಾರವ್ಯಾಸನ ಎರಡು ಪ್ರಸಂಗಗಳು ಸಹಚಿಂತನ; ಶ್ರೀನಿವಾಸ ಮೂರ್ತಿ).

'' ನಾವು ಕಾಣುವುದು ಸೌಂದರ್ಯವನ್ನು ನೋಡಿ ಆನಂದ ಪಡುವ ಪಾಂಡುವನ್ನಲ್ಲ; ಬೆರಗಾದ ರಾಜನನ್ನು, ನಿಯಂತ್ರಣ ತಪ್ಪಿದ ರಾಜನನ್ನು'' (ಕುಮಾರವ್ಯಾಸನ ಮೂರು ಪದ್ಯಗಳು, ವಿದ್ಯಾರ್ಥಿ ಭಾರತಿ: ಶ್ರೀನಿವಾಸ ದೇಶಪಾಂಡೆ).

'' ಕುಂತಿ ಮಗನನ್ನು ತೊರೆದುದು ಆವನು ತನ್ನವನೆಂದು ಸಂದರ್ಭಗಳು ಒದಗಿದಾಗಲೂ ಒಪ್ಪಿಕೊಳ್ಳಲು ಹಿಂಜರಿದಷ್ಟು ಕ್ರಮವಾಗಿ ಕರ್ಣನನ್ನು ಸಾವಿನತ್ತ ನಿಷ್ಠುರವಾಗಿ ತಳ್ಳುತ್ತ ಬಂತು. ಕರ್ಣನು ನಿಸ್ತೇಜನಾಗುವುದಕ್ಕೆ ಕುಂತಿ ಬಲು ಮಟ್ಟಿಗೆ ಕಾರಣಳು'' . (ಕುಮಾರ ವ್ಯಾಸ ಪ್ರಶಸ್ತಿ : ಕುಮಾರವ್ಯಾಸನದುರಂತ ಕರ್ಣ ; ಕುವೆಂಪು)

'' ಆದಿ ಪರ್ವದಲ್ಲಿ ವರ್ಣವಾಗಿರುವ ಹುಟ್ಟುಗಳು. ಒಂದೊಂದು ದೃಷ್ಟಿಯಿಂದ ಅರ್ಥಪೂರ್ಣ-ವಾಗಿವೆ. ಮತ್ಸ್ಯಗಂಧಿ ಕುರುವಂಶವಾಹಿ ಹರಿಗಡಿದುದನ್ನು ಕಂಡು ವೇದವ್ಯಾಸನನ್ನು ಬರಮಾಡಿಕೊಂಡಾಗ ಅನರ್ಥ ಜನ್ಮಗಳ ಪರಂಪರೆ ಪ್ರಾರಂಭವಾಯಿತು. (ಕುತರ್ಕಕೋಟಿ: ಗದುಗಿನ ಭಾರತದ ಕೆಲವು ಪದ್ಯಗಳು).

ಇಂಥ ಸೂಚನೆಗಳು ಸ್ತ್ರೀವಾದಿ ಅಧ್ಯಯನದ ದೃಷ್ಟಿಯಿಂದ ಪೂರಕವಾಗಿದೆ. ಆದರೆ ಪ್ರಾಸಂಗಿಕವಾದ ಇಂಥ ಒಂದೊಂದು ಭಾವಗಳಿಂದಾಗಿ ಈ ಲೇಖನಗಳನ್ನು ಈ ದೃಷ್ಟಿಯಿಂದ ಒಪ್ಪಿ ಕೊಳ್ಳಲಾಗುವುದಿಲ್ಲ. ಅಂದರೆ ಇಲ್ಲಿಯವರೆಗೆ ಕುಮಾರವ್ಯಾಸ ಭಾರತ ಕುರಿತು ಬಂದ ವಿಮರ್ಶೆಗಳು ಬಹುಮಟ್ಟಿಗೆ ಅತಿಮಾನುಷ ವ್ಯಕ್ತಿತ್ವಗಳ ಸಮರ್ಥನೆ, ಸ್ತ್ರೀ ಸೌಂದಾರ್ಯದ ವರ್ಣನೆ, ಪಾತ್ರಗಳ ಔಚಿತ್ಯ ಸಮರ್ಥನೆ, ಕವಿಯ ಭಾಷಾ ಪ್ರಭುತ್ವ, ಸೃಷ್ಟಿ ಪ್ರತಿಭೆ, ಈ ಅಂಶಗಳನ್ನು ಮುಖ್ಯ ಮಾಡಿ ಕೊಂಡವುಗಳೇ ಆಗಿವೆ. ಮತ್ತು ಇಂಥ ಲೇಖನಗಳು ಆಯಾ ಪ್ರಸಂಗಗಳ (ಅಥವಾ) ಆಯಾ ಪದ್ಯಗಳ ವಿಮರ್ಶೆಗಳಾಗಿವೆ ಹೊರತು ಇಡೀ ಕೃತಿಯ ಒಟ್ಟು ಗ್ರಹಿಕೆ ಎದ್ದು ಕಾಣುವುದಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಕುಮಾರವ್ಯಾಸ ಭಾರತ ಸಾಹಿತ್ಯಾಸಕ್ತರಿಗೆ ಪರಿಚಯವಾಗಿರುವುದು ಗದುಗಿನ ಭಾರತದ ಸಮಗ್ರ ಅಧ್ಯಯನದಿಂದಲ್ಲ. ಈ ಮಾತನ್ನು ಕುಮಾರವ್ಯಾಸ ಭಾರತವನ್ನು ಕುರಿತು ಬಂದ ಪಿ.ಎಚ್.ಡಿ. ಪ್ರಬಂಧಗಳ ಮಟ್ಟಿಗೂ ಹೇಳಬಹುದು.

# ಅಧ್ಯಾಯ – 3

## ಕುಮಾರವ್ಯಾಸನ ಜೀವನ ದರ್ಶನದಲ್ಲಿ ಹೆಣ್ಣಿನ ಸ್ಥಾನ

(ಅ) ಪ್ರಭುತ್ವ ಮತ್ತು ಹೆಣ್ಣು : ಕೆಲವು ಆಲೋಚನೆಗಳು

(ಆ) ಶಾಪ – ವರ – ಪ್ರತಿಜ್ಞೆ

# ಪ್ರಭುತ್ವ ಮತ್ತು ಹೆಣ್ಣು : ಕೆಲವು ಆಲೋಚನೆಗಳು

ತಿಳಿಯ ಹೇಳುವೆ ಕೃಷ್ಣಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ,
ನೆಲೆಗೆ ಪಂಚಮ ಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ
ಹಲವು ಜನ್ಮದ ಪಾಪರಾಶಿಯ
ತೊಳೆವ ಜಲವಿದು ಶ್ರೀಮಧಾಗಮ
ಕುಲಕೆ ನಾಯಕ ಭಾರತಾಕೃತಿ ಪಂಚಮಶ್ರುತಿಯ

(ಆದಿ ಪರ್ವ : 1 — 12)

ತಾಯಿಯಾಗಿ, ಹೆಂಡತಿಯಾಗಿ, ಸೊಸೆಯಾಗಿ, ಸೇವಕಿಯಾಗಿ, ದಾಸಿಯಾಗಿ, ರೂಪಸಿಯಾಗಿ, ರಾಕ್ಷಸಿಯಾಗಿ, ವಿಜಯಾಂಗನೆಯಾಗಿ, ವಿರಹದ ದೇವತೆಯಾಗಿ, ಅಸ್ತ್ರಯಾಗಿ, ಹೀಗೆ ಹೆಣ್ಣಿನ ಅನೇಕ ಮಾದರಿಗಳನ್ನು ಕರ್ನಾಟಕ ಭಾರತ ಕಥಾಮಂಜರಿಯಲ್ಲಿ ಕುಮಾರವ್ಯಾಸ ದಾಖಲಿಸುತ್ತಾನೆ. ಶಾಪಿತ ಗಂಗೆಯ 'ಏಳು ಮಕ್ಕಳ ಹತ್ಯೆಯಿಂದ ಪ್ರಾರಂಭವಾಗಿ ನೂರೊಂದು ಜನ ಮಕ್ಕಳನ್ನು ಕಳೆದು ಕೊಂಡ ಗೋಳಿನ ಗಾಂಧಾರಿಯತನಕ ಸ್ತ್ರೀ ಬಗೆಗಿನ ಆಲೋಚನೆಗಳೆಲ್ಲ ಗಂಡು ಮಕ್ಕಳ ಕಾರಣದಿಂದಲೇ ಸೃಷ್ಟಿಯಾಗಿ ಅವರ ನಾಶದಿಂದಲೇ ಪರ್ಯವಸಾನ ಗೊಳ್ಳುತ್ತವೆ. ಈ ಆಲೋಚನೆಗಳನ್ನು ಎರಡು ಬಗೆಯಲ್ಲಿ ಚರ್ಚಿಸಲು ಸಾಧ್ಯ.

1. ಇಡೀ ಕೃತಿಯಲ್ಲಿ ನಡೆಯುವ ಘಟನೆಗಳ ಮೂಲಕ ಸ್ತ್ರೀಯನ್ನು ನೋಡುವುದು.
2. ನೀತಿಗಳ ಮೂಲಕ ಆಕೆಯನ್ನು ವ್ಯಾಖ್ಯಾನಿಸಿರುವುದು.

ಗಂಡು ತನ್ನ ಜೀವನ ಸಂದರ್ಭದ ಇಕ್ಕಟ್ಟುಗಳಲ್ಲಿ ಸಿಕ್ಕಿಕೊಂಡಾಗಲೆಲ್ಲ ಧರ್ಮ ಸೂಕ್ಷ್ಮದ ಚರ್ಚೆಗಳು, ಆ ಇಕ್ಕಟ್ಟಿನಿಂದ ಪಾರಾಗಲು ಹೋದಾಗ ನೀತಿಗಳು ತಾನೇ ತಾನಾಗಿ ಹುಟ್ಟಿ ಕೊಳ್ಳುತ್ತವೆ. ಅದು ವ್ಯಾಸನ ರೂಪದಲ್ಲಿರ ಬಹುದು '' ಮಾರ್ಕಂಡೇಯನ ರೂಪದಲ್ಲಿರ ಬಹುದು, ನಾರದನ ರೂಪದಲ್ಲಿರ ಬಹುದು ಅಥವಾ ಕೃಷ್ಣ ಧರ್ಮಜರ ರೂಪದಲ್ಲಾಗ ಬಹುದು, ಈ ನೀತಿಗಳು ಪ್ರಾಸಂಗಿಕವಾಗಿ ಮುಖ್ಯ ಕಥಾ ಪಾತ್ರಗಳಿಂದ ಪುರುಷರಿಗೇ ಒದಗಿ ಬರುತ್ತವೆ. ಆದರೆ ತನ್ನ ದಾಸತ್ವವನ್ನು ಪ್ರಶ್ನಿಸುವ ದ್ರೌಪದಿಗೆ, ತನ್ನ ಇಚ್ಛೆಯನ್ನು ಮನ್ನಿಸಬೇಕೆಂದು ಕೇಳಿ ಕೊಳ್ಳುವ ಅಂಬೆ ಊರ್ವಶಿಯರಿಗೆ ಸಹಾಯಕ್ಕೆ ಬರಲಾರವು ಇದರ ಮತ್ತೊಂದು ಆಯಾಮವನ್ನು ಗುರುತಿಸ ಬಹುದಾದರೆ ಕುಂತಿ, ಮಾದ್ರಿ, ಗಾಂಧಾರಿ ಸತ್ಯವತಿ, ಅಂಬಿಕೆ ಅಂಬಾಲಿಕೆ ಇವರ ಸಂಕಟಗಳಿಗೆ ಸಹಾಯಕವಾ ಪರಿವರ್ತಿತವಾಗುವುದು.

ಗಂಡಿನ ನಿರ್ದೇಶನಗಳೇ ಹೊರತು ಯಾವ ಸ್ವತಂತ್ರ ಆಲೋಚನೆಗೂ ಇಲ್ಲಿ ಅವಕಾಶವಿರುವುದಿಲ್ಲ. ಸುತರು " ಅನ್ಯಥಾ ಸಂಭಾಷಿಸಿದರೆ ದುಷ್ಕೀರ್ತಿವಧುವೆಂಜಲಸಲ್ಲೇ ಕುಲವ " ಎನ್ನುವ ಕುಂತಿಯ ಮಾತು ಸಹ ಪುರುಷ ಜಗತ್ತಿನ ಭಯದಿಂದ ಬಂದದ್ದೇ ಆಗಿದೆ. ಆದ್ದರಿಂದಲೇ ಇಲ್ಲಿನ ಒಟ್ಟು ನಾರಿಯ ಸ್ಥಿತಿಯನ್ನು ಗ್ರಹಿಸಿದಾಗ ಭೀಷ್ಮನ ಪ್ರತಿಜ್ಞೆ" ನಾರಿಯರಾದವರು ಭಾಗೀರಥಿಗೆ ಸರಿ" ಯಾವ ಪ್ರಯೋಜನಕ್ಕೂ ಬರದ ವೈಯಕ್ತಿಕ ಆದರ್ಶವಾಗಿ ಮಾತ್ರ ಕಾಣುತ್ತದೆ ಭೀಷ್ಮ ತನಗಾಗಿ ಹೆಣ್ಣನ್ನು ತಿರಸ್ಕರಿಸುವುದು ನಿಜವಾದರೂ, ಸತ್ಯವತಿಯನ್ನು ತಂದು ಶಂತನ ವಿರಹದ ಕಿಚ್ಚನ್ನು ನಂದಿಸಿದರೂ ಅಂಬೆ, ಅಂಬಿಕೆ, ಅಂಬಾಲಿಯರನ್ನು ವಿವಾಹ ಮಂಟಪದಿಂದ ಎಳೆದು ತರುವ ಮತ್ತು ಅವರು ನೃಪನಾದ ವಿಚಿತ್ರವೀರ್ಯನನ್ನು ರಮಿಸುವಂತೆ ಮಾಡುವ ಕ್ರೌರ್ಯ, ಅವನ ತ್ಯಾಗವನ್ನು ವ್ಯಂಗ್ಯವಾಡುತ್ತದೆ. ಪರಶುರಾಮ " ನುಡಿಯ ಮೀರದ ನಮ್ಮ ಶಿಷ್ಯನನೊಡಬಡಿಸಿ ಕೊಳ್ಳೆಂದು " ಅಂಬೆಗೆ ಹೇಳುವುದರ ಮೂಲಕ ಭೀಷ್ಮನ ತ್ಯಾಗವನ್ನು ಕೀರ್ತಿಸಿದರೂ ಅವನ ಈ ತ್ಯಾಗ ಭರತ ವಂಶದ ಉತ್ತರಾಧಿ-ಕಾರಿಗಳನ್ನು ಪಡೆಯಲು ಹೆಣ್ಣುಗಳನ್ನು ತರುವಲ್ಲಿ ಅಣಕಿಸುತ್ತದೆ. ಪಾಂಡವರು ಕೌರವರಿಗೆ ರಾಜ್ಯಾಧಿ-ಕಾರದ ಅರಿವು ಬರುವತನಕ ಭರತ ವಂಶದ ಸೂತ್ರಧಾರತ್ವವನ್ನು ವಹಿಸಿ ಸೋಮವಂಶದ ಬೆಳವಿಗೆಯನ್ನು ಮಾಡಿ ಕೊಂಡಾಡಿದರೂ, ಭೀಷ್ಮ ಅನಂತರ ಗೌಣವಾಗುತ್ತಾನೆ. ಅವರಿಬ್ಬರ ರಾಜ್ಯಾಧಿಕಾರದ ವ್ಯಾಜ್ಯದಲ್ಲಿ ಪರಿಹಾರವಿಲ್ಲದ ಸಲಹೆಗಾರನಾಗುತ್ತಾನೆ. ಇರಾವತಿ ಕರ್ವೆಯವರು ಹೇಳುವಂತೆ" ಕುರುವಂಶದಲ್ಲಿ ಹೆಂಗಸರ ಮಾನಹಾನಿ ಅತಿಶಯವಾಯಿತು. ಅವರ ದೇಹ ಮನಗಳು ನುಚ್ಚು ನೂರಾದವು. ಅಂಥ ಕುಲವು ನಾಶಕ್ಕೆ ಈಡಾಗಿತ್ತು. ದುರದೃಷ್ಟದಿಂದ ಭೀಷ್ಮನಿಗೆ ಈ ಪಾಪ ಮಾಡಬೇಕಾಯಿತು. ಭೀಷ್ಮನು ತನಗಾಗಿ ಯಾವುದನ್ನು ಮಾಡಲಿಲ್ಲ. ರಾಜ್ಯದ ಮತ್ತು ಸ್ತ್ರೀ ಸಂಗದ ತ್ಯಾಗ ಮಾಡುತ್ತಲೇ ಆತನಿಗೆ ಸ್ವಂತದ ಕರ್ತವ್ಯಗಳೇ ಉಳಿದಿರಲಿಲ್ಲ" (ಪುಟ-28)

ಮಹಾಭಾರತ ಬಹಳ ಮುಖ್ಯವಾಗಿ ರಾಜ್ಯದ ಉತ್ತರಾಧಿಕಾರತ್ವದ ವ್ಯಾಜ್ಯವನ್ನು ವ್ಯಾಖ್ಯಾನಿಸುತ್ತದೆ. ಈ ವ್ಯಾಜ್ಯ ಗಂಡಿನದೇ ಆಗಿರುವುದರಿಂದ ಇಲ್ಲಿನ ಹೆಣ್ಣುಗಳು , ಒಂದು ಕಡೆ ಗಂಡಿನ ರಾಜ್ಯಾಧಿಕಾರದ ಆಸೆಯಿಂದ ನರಳಿದರೆ, ಮತ್ತೊಂದು ಕಡೆಯಲ್ಲಿ ಗಂಡು ಹೆಣ್ಣುಗಳ ಸಂಬಂಧಗಳಲ್ಲಿನ ಯಾತನೆಯು ಅವರ ಪಾಲಿನದೇ ಆಗಿವೆ. ರಾಜತ್ವದ ದರ್ಪ ಮತ್ತು ಪುರುಷತ್ವದ ದರ್ಪಗಳು 'ಏಕ ಕಾಲಕ್ಕೆ ಇವರ ಮೇಲೆ ಆಳ್ವಿಕೆಯನ್ನು ನಡೆಸಿವೆ. ' ಕೃತಶತ್ರು ಪಕ್ಷ ವಿನಾಶರನ್ನು ' ಪಡೆಯುವಲ್ಲಿ ಮತ್ತು ಆ ಮಕ್ಕಳು ನಡೆಸಿದ ವಿನಾಶವನ್ನು ನೋಡುವ ಪ್ರೇಕ್ಷಕರಾಗಿಯೇ ಅವರು ಉಳಿಯಬೇಕಾಯಿತು.

ಇಂಥ ಮಕ್ಕಳನ್ನು ನಿಯೋಗದಿಂದ ಪಡೆದರೂ ಪಾಂಡು, ಧೃತರಾಷ್ಟ್ರ, ಭೀಷ್ಮ ಮೊದಲಾದವರಿಗೆಲ್ಲ ಶಾಸ್ತ್ರ ಸಮ್ಮತದ ಪರಿಹಾರ ದೊರೆಯಿತು. ಆದರಿಂದಲೇ ಉಸಿರಾಡಿದರು. ಆದರೆ ಹೆಣ್ಣಿನೊಂದಿಗಿನ ಸಂಬಂಧಗಳು ಅವರಿಗೆ ಮುಖ್ಯವಾಗಲಿಲ್ಲ. ಉತ್ತರಾಧಿಕಾರಕ್ಕೆ ಸಿಕ್ಕ ಪುತ್ರ ವೈಭವದಲ್ಲಿ ಇಲ್ಲಿನ ಹೆಣ್ಣುಗಳನ್ನು ಮರೆತರು. ಇದಕ್ಕೊಂದು ಚರಿತ್ರೆಯೇ ಇಲ್ಲಿ ದೊರೆಯುತ್ತದೆ. ಗಂಗೆಯನ್ನು ಮದುವೆಯಾದ ಶಂತ ಎಂಟನೇ ಮಗುವಾದ ದೇವವ್ರತನ ನ್ನು ಉಳಿಸಿಕೊಳ್ಳಲು ಶಾಪಿತಳಾದ ಗಂಗೆಯನ್ನು ಬಿಡುತ್ತಾನೆ. ವ್ಯಾಸನನ್ನು ಪಡೆದ ಪರಾಶರ ಮತ್ಸ್ಯಗಂಧಿನಿಯನ್ನು ತ್ಯಜಿಸುತ್ತಾನೆ. ಜೊತೆಗೆ ಕನ್ಯತ್ವವನ್ನು ಕರುಣಿಸುವ ದರ್ಪ ಸಹ ಪರಾಶರನಿಗಿದೆ. ಅಂದರೆ ಗಂಡಿನ ಒಪ್ಪಿತ ಮೌಲ್ಯಗಳು ಸ್ತ್ರೀಯನ್ನು ತನಗೆ ಬೇಕಾದಂತೆ ಬಳಸಿಕೊಳ್ಳುವುದು ಧರ್ಮಬದ್ಧವಾಗಿಯೂ ಕಂಡಿದೆ. ಈ ಧರ್ಮ ಬದ್ಧತೆ ವಂಶಪರಂಪರೆಯ ಮುಂದುವರಿಕೆಯಲ್ಲಿ ಸೇರಿಕೊಂಡಿದೆ. ಆದ್ದರಿಂದಲೇ ಪಾಂಡುವಿನ ಅನುಜ್ಞೆಯ ಮೇರೆಗೆ ಕುಂತಿ, ಮಾದ್ರಿಯರು ಮಂತ್ರಗಳಿಂದ ಮಕ್ಕಳನ್ನು ಪಡೆಯಬೇಕಾಗುತ್ತದೆ. ಇಲ್ಲಿ ಯಾವ ಅನುಜ್ಞೆಯೂ ಇಲ್ಲದೆ ಕರ್ಣನನ್ನು ಪಡೆದ ಕುಂತಿ ಕೊನೆಗೂ ಅಂತರ್ಮುಖ ಸಂಕಟದಲ್ಲೇ ನರಳುತ್ತಾಳೆ. ಕೊನೆಗೆ ಆ ಮಗನ ನಾಶವಾದ ನಂತರ ತನ್ನ ಸಂಕಟಗಳನ್ನು ಹೊರ ಹಾಕಬೇಕಾಗುತ್ತದೆ. ಪಾಂಡು ಸತ್ತ ಮೇಲೆ ಗಂಡು ಹೆಣ್ಣುಗಳ ನಡುವಿನ ಸಂಬಂಧಗಳು ಇಬ್ಭಾಗವಾಗುತ್ತವೆ. ಸುರಸತಿಯರಲ್ಲಿ ನೆರೆದ ಪಾಂಡುವಿನ ಚಿತೆಯೊಳಗೆ ಮಾದ್ರಿ ಬೆಂದರೆ ರಾಜ್ಯಾಧಿಕಾರಿಕ್ಕಾಗಿ ಮಕ್ಕಳ 'ಏಳಿಗೆಯನ್ನು ನೋಡುತ್ತ ಕುಂತಿ ಮತ್ತೊಂದು ಬಗೆಯಲ್ಲಿ ಬೇಯುತ್ತಾಳೆ. ಮುದಿ ಹಾರುವನ ತನಿಬೇಂಟೆಯ ಮೂಲಕ ಮಮ್ಮ ಸಂಬಂಧಗಳ '' ಬೇರುಗೊಲೆ ಆದ ನೋವನ್ನು ಅವಳ ಬದುಕಿನುದ್ದಕ್ಕೂ ಅನುಭವಿಸಬೇಕಾಗುತ್ತದೆ. ಅಷ್ಟೇ ಅಲ್ಲ ಈ ಒತ್ತಡ ದ್ರೌಪದಿಗೂ ಮುಂದುವರಿಯುತ್ತದೆ.

ಕುಮಾರವ್ಯಾಸ ಭಾರತದಲ್ಲಿ ಹೆಣ್ಣಿನ ಹುಟ್ಟಿನ ಸಂದರ್ಭ ವರ್ಣಿಸಲ್ಪಡುವುದು ದ್ರೌಪದಿಗೆ ಸಂಬಂಧಿಸಿ ಮಾತ್ರ. '' ಕಾಮನ ಕೈದುವಾಗಿ ಮೂರು ಲೋಕದ ಮೋಹನ ಮಂತ್ರ ದೇವತೆಯಾ.. ಕವಿ ಇವಳ ಜನನ ಸಂದರ್ಭವನ್ನು ವಿವರಿಸುತ್ತಾನೆ. ಈ ಅಂಶ ಮುಂದಿನ ಆಕೆಯ ಸ್ವಯಂವರದ ಪುರುಷ ಪ್ರತಿಷ್ಠೆಯ ಹೋರಾಟಕ್ಕೆ ಮತ್ತು ಜಟಾಸುರ, ಜಯದ್ರಥ ಕೀಚಕರು ಅವಳ ಮೇಲೆ ಆಕ್ರಮಣ ನಡೆಸುವುದಕ್ಕೆ ಕಾರಣವಾಗುತ್ತದೆ. ಅಂಥ ಆಕ್ರಮಣದ ಸಂಧರ್ಬದಲ್ಲಿ ಸಹ ಕವಿ ದ್ರೌಪದಿಯನ್ನು '' ಕುಡಿತೆಗಂಗಳ ಚಪಲೆಯಾಗಿ ಉಂಗುರವಿಡಿಯನಡುವಿನನೀರೆಯಾಗಿ ಹಂಸಗಮನೆ'' ಯಾಗಿಯೇ ಚಿತ್ರಿಸುತ್ತಾನೆ. ಕೀಚಕನ ಆಕ್ರಮಣವನ್ನು ಗಂಡಂದಿರಲ್ಲಿ ಹೇಳಿಕೊಂಡಾಗ '' ಕರ್ಮ ಫಲವಿದು ನಿನಗೆ ಮಾನಿನಿ'' ಎಂದೇ ಧರ್ಮರಾಯ ಅವಳಿಗೆ ಹೇಳುತ್ತಾನೆ. ಅಲ್ಲದೆ'' ಕ್ಷಮೆಯು ಅಖಿಳ ದೋಷಾ ಪಹಾರವು, ಶೌರ್ಯ, ಧರ್ಮದ ರೂಪು ನೆಲೆಗಳೇ ಆ ಕ್ಷಮೆಯು'' ಎಂಬ ಅವಳಿಗೆ ಸಹನೆಯನ್ನು

ಬೋಧಿಸುತ್ತಾನೆ. ಇಂಥ ಕ್ಷಮೆ ಇದ್ದಾಗ ಮಾತ್ರ 'ಪತಿವ್ರತೆ ಪುಣ್ಯವಧು ನೀನು' ಎಂದೂ ಹೇಳುತ್ತಾನೆ. ಇನ್ನೂ ಈ ದ್ರೌಪದಿಯನ್ನೂ ದ್ರುಪದ ಸಲುಹಿದ್ದು ಪಾರ್ಥನಿಗೆ ರಾಣಿಯಾಗಲೆಂದೇ ಸ್ವಯಂವರದ ಸಂದರ್ಭದಲ್ಲಿ ಅರ್ಜುನ ಕಾಣದೆ ಹೋದರೂ '' ಅರ್ಜುನನೇ ಈ ಕುಮಾರಿಯ ರಮಣನೆಂದು ಅವನ ಮನದ ಸಂಕಲ್ಪವಾಗಿ ಉಮ್ಮಳಿಸುತ್ತಾನೆ. ಇಂಥ ಗ್ರಹಿಕೆಗಳಲ್ಲಿ ಪುರುಷ ಪ್ರಾಧಾನ್ಯತೆ ಕೆಲಸ ಮಾಡಿರುವುದನ್ನು ಯಾರೂ ಗಮನಿಸಬಹುದು. ಮುಂದೆ ದ್ರೌಪದಿ ಅರ್ಜುನನ ಕೊರಳಿಗೆ ಮಾಲೆಯನ್ನು ಹಾಕಿದರೂ ಐದು ಜನ ಗಂಡಂದಿರಿಗೆ ಸತಿಯಾಗಿ ಬದುಕಬೇಕಾದ ಒತ್ತಡ ಈ ಗ್ರಹಿಕೆಯನ್ನು ಮತ್ತಷ್ಟು ಗಟ್ಟಿಗೊಳಿಸುತ್ತದೆ. ಇದನ್ನು '' ಮಾತೃವಚನವಲಂಘ್ಯವಿದು ವಿಖ್ಯಾತ ಪದ್ಧತಿ ಲೋಕಯಾತ್ರಾಭೀತಿಯಲ್ಲಿ ಭಯವೆ ಧರ್ಮ ರಹಸ್ಯನಿಷ್ಠುರಿಗೆ'' ಎಂದು ಐದು ಜನಕ್ಕೂ ಪತ್ನಿಯಾಗಿ ಒಪ್ಪಬೇಕಾದುದನ್ನು ಅರ್ಜುನ ಸಮರ್ಥಿಸಿಕೊಳ್ಳುತ್ತಾನೆ.

ಐದು ಜನ ವೀರರ ಪತ್ನಿಯಾದರೂ ಪರಪುರುಷರ ಆಕ್ರಮಣಗಳಿಂದೇನೂ ದ್ರೌಪದಿ ಮುಕ್ತಳಾಗಲಿಲ್ಲ. ಇಂಥ ಒತ್ತಡಗಳ ಸ್ಥಿತಿಯಲ್ಲಿ ಸಹ ಧರ್ಮರಾಯನ ಧರ್ಮ ಸೂಕ್ಷ್ಮಗಳಿಗೆ ಅವಳು ಬಲಿಯಾಗಬೇಕಾಯಿತು. '' ಒಡಲು ಬೀಳಲಿ ಮೇಣು ತಮ್ಮಂದಿರು ಅಡವಿಯಲಿ ಹಾಯ್ಕಿ ಹೋಗಲಿ ಮಡದಿ ಮುನಿಯಲಿ. ಸತ್ಯದ ನುಡಿಗೆ ಹಾದರವಿಲ್ಲದಂತಿರೆ ಇವರ ಆಗುಹೋಗಿನ ಗೊಡವೆ ನನಗಿಲ್ಲ'' . ಎಂದು ನಿರ್ವೀರ್ಯ ಸಂಬಂಧಗಳ ವ್ಯಾಖ್ಯಾನಗಳಲ್ಲಿ ತನ್ನನ್ನು ವೈಭವೀಕರಿಸಿಕೊಳ್ಳುತ್ತಾನೆ. ಆದಕ್ಕಾಗಿಯೇ ಆಕೆಯನ್ನು ಒಂದು ವಸ್ತುವಿನಂತೆ ಜೂಜಿನಲ್ಲಿ ಪಣವಾಗಿಡುತ್ತಾನೆ. ದುಶ್ಶಾಸನನ '' ವಾಮಾಂಗದಲಿ ಬಾಗಿದ ತನುಲತೆಯ ವರಸುದತಿ'' ಯಾಗಿ ಪುರುಷ ಪ್ರತಿಷ್ಠೆ ಅಹಂಗಳಿಗಾಗಿಯೇ ಮೀಸಲಾದ ದ್ಯೂತ ಸಭೆಗೆ ಆಕೆ ಬರಬೇಕಾಗುತ್ತದೆ. ಧರ್ಮರಾಯನು ಸೋತ ಸೋಲಿನಿಂದಾಗಿ ತನ್ನ ದಾಸ್ಯತ್ವವನ್ನು ಒಪ್ಪಿಕೊಳ್ಳದ ದ್ರೌಪದಿ '' ಸ್ತ್ರೀಮತವನು ಉತ್ತರಿಸಲಾಗದೆ ಧರ್ಮಶಾಸ್ತ್ರದೊಳು''( ಸಭಾಪರ್ವ 14-8.) ಎಂದು ಪುರುಷ ಸಭೆಯನ್ನು ಪ್ರಶ್ನಿಸಿದಾಗ ಇಡೀ ಸಭೆ ಮೂಕ ಪ್ರೇಕ್ಷಕರಾಗಿ ಅವಳ ಮೇಲಿನ ಪುರುಷ ಒಡೆತನವನ್ನು ಒಪ್ಪಿಕೊಳ್ಳುತ್ತದೆ. ಅವಳ ಮೇಲಿನ ಕೌರವ ಪ್ರಹಾರಕ್ಕೆ ಭೀಮ ಸಿಟ್ಟುಗೊಂಡರೂ ಧರ್ಮಜನ ಕೈಗಳನ್ನು ಸುಡುವೆನೆಂದರೂ ಇಡೀ ಸಭೆಯ ಮೌನ ಒಪ್ಪಿಗೆಯಲ್ಲಿ ಅದು ಕೇವಲ ಚೀರಾಟವಾಗಿ ಮಾತ್ರ ಉಳಿಯುತ್ತದೆ. ಆ ಸಂದರ್ಭದಲ್ಲಿ ಅರ್ಜುನ ಧರ್ಮಜನನ್ನು ಸಮರ್ಥಿಸುತ್ತ ದ್ರೌಪದಿಯನ್ನು ಹೀಗೆ ವ್ಯಾಖ್ಯಾನಿಸುತ್ತಾನೆ.

'' ನಮ<br>
ಗೀ ನಿತಂಬಿನಿಯಾದಿಯಾದ ಸಮಸ್ತ ವಸ್ತುಗಳು<br>
ಈ ನರೇಂದ್ರಗೆ ಸರಿಯೆ ಕುಂತೀ<br>
ಸೂನುವೇ ಪ್ರಾಣಾರ್ಥದಿಂದ ಸ<br>
ಮಾನನೈ ನಮಗೀತನೇ ಗತಿಯೆಂದನು ''

ವಿಕರ್ಣ ನೀವೇಕೆ ನಿಮ್ಮನು ಮರೆದಿರಿ "ತನ್ನ ಸೋತಾಗಲೇ ಮಹೀಪತಿ ಅನ್ಯನಾದನು ಸತಿಗೆ" ಎಂದು ಸಭೆಯನ್ನು ಎಚ್ಚರಿಸಿದರೂ ಯಾವ ಪ್ರಯೋಜನವೂ ಆಗುವುದಿಲ್ಲ. ಏಕಸತಿ ಬಹುಪತಿತ್ವವನ್ನು ವೈದಿಕ ವಿರುದ್ಧವೆಂದು ಹೇಳುತ್ತಲೇ ಆಕೆಯನ್ನು ಜರಿಯಲಾಗುತ್ತದೆ. ಭೀಮ ವಿಕರ್ಣರ ಮಾನವೀಯ ಪ್ರತಿಕ್ರಿಯೆಗಳು ಇಂಥ ದರ್ಪದಲ್ಲಿ ಕೇಳುವುದೇ ಇಲ್ಲ. '' ಹೊಗೆ ಮೊಗದ ಕಿಡಿಗಣ್ಣ ಕೆಮ್ಮೀಸೆಗಳ ಗುಂಜುರಿನ ಗೇಶದ ವಿಗಡ'' ನಾದ ದುಶ್ಯಾಸನ ಬಂದು ಅವಳ ಸೆರಗನ್ನು ಹಿಡಿಯುತ್ತಾನೆ. ಸೆಳೆಯುತ್ತಾನೆ ಕುಚವನ್ನು ತನ್ನ ತೋಳುಗಳಿಂದ ಮುಚ್ಚಿಕೊಂಡ ಅಬಲೆ ದ್ರೌಪದಿ ಸಭೆಯ ಎಲ್ಲರನ್ನೂ ಬಿಡಿಸಲು ಬೇಡುತ್ತಾಳೆ.

'' ಕ್ರೂರನಿವ ದುಶ್ಯಾಸನನು ಗಾಂ  
ಧಾರಿ ಬಿಡಿಸಾ ಸೆರಗ, ಸೊಸೆಯ  
ಲ್ಲಾರು ಹೇಳಾ ತಂಗಿಯಲ್ಲಾ ನಿಮಗೆ ಭಾನುಮತಿ,  
ವೀರ ಸೈಂಧವನರಸಿ ರಾಜ ಕು  
ಮಾರಿ ನೀ ನಾದಿನಿಯಲಾ, ಖಳ  
ಕೌರವದೊಳದುಂವನು ಬಿಡಿಸಿ . . . . . . . . '' (ಸ: 14 — 105)

ಎಂದು ಒರಲುತ್ತಾಳೆ. '' ಪತಿಗಳೆನ್ನನು ಮಾರಿ ಧರ್ಮಸ್ಥಿತಿಯನ್ನು ಕೊಂಡರು '' (ಸ. 14—108) ಎಂದು ಪರಿಸ್ಥಿತಿಯ ವಾಸ್ತವವನ್ನು ವ್ಯಾಖ್ಯಾನಿಸುತ್ತಾಳೆ. ಈ ಪ್ರಸಂಗದಲ್ಲಿ ಇಲ್ಲಿಯತನಕ, ದ್ರೌಪದಿಯ ಮಾನವೀಯ ಹೋರಾಟ, ಇಂಥ ಹೋರಾಟವನ್ನು ಮೆಟ್ಟಿದ ಗಂಡಿನ ದರ್ಪ ಮುಖ್ಯವಾದರೆ, ಮುಂದೆ ಕವಿಯ ಜಾಣಾಕ್ಷತನ ಮುಂದುವರಿಯುತ್ತದೆ. ಕೃಷ್ಣ ಕಥೆಯಲ್ಲಿ ದ್ರೌಪದಿಯ ಹಣೆಬರಹವನ್ನು ಬರೆಯತೊಡಗುತ್ತಾನೆ.

ಗತಿವಿಹೀನರಿಗಕಟ ನೀನೇ  
ಗತಿಯಲ್ಲೆ ಗೋವಿಂದರಿಪು ಬಾ  
ಧಿತರಿಗೆ ಅಬಲರಿಗೆ ಆರ್ತರಿಗೆ ನೀ ಪರಮಬಂಧುವಲಾ (ಸ: 14—101)

ಎಂದು ದ್ರೌಪದಿಯ ಮೂಲಕ ಅದೃಶ್ಯ ಪುರುಷೋತ್ತಮನ ವ್ಯಾಖ್ಯಾನ ಮಾಡುತ್ತಾನೆ.

ದ್ರೌಪದಿಗೆ ವಸ್ತ್ರವನ್ನು ಅಕ್ಷಯವಾಗಿಸಿ ಮಾನವನ್ನು ಮುಚ್ಚುವ ಗಂಡಿನ ಪುರುಷೋತ್ತಮನ ವ್ಯಕ್ತಿತ್ವದ ಪ್ರದರ್ಶನ ಕೃಷ್ಣನ ಮೂಲಕ ಇಲ್ಲಿ ನಡೆಯುತ್ತದೆ. ಅದೃಶ್ಯದಲ್ಲಿದ್ದುಕೊಂಡು ಪ್ರಕಟವಾಗುವ ಕೃಷ್ಣನ ಈ ಗುಣ ಪುರುಷನ ಮಾನವೀಯ ವೇಷದ ದರ್ಪದ ಔನ್ನತ್ಯವನ್ನು ತೋರುತ್ತದೆ. ಈ ಮಾಯಾವೀತನ ಪುರುಷ ಪ್ರಧಾನ ಸಮಾಜದಲ್ಲಿ ಗಂಡಿಗೆ ಮಾತ್ರ ಒದಗಿಬರಲು ಸಾಧ್ಯ. ಇಲ್ಲವಾದರೆ ದ್ರೌಪದಿಯ ಮಾನಹಾನಿಯ ಹೆಸರಿನಲ್ಲಿ ತಮ್ಮರಕ್ಷಾ ಹೀನ ಸ್ಥಿತಿ ಪ್ರಕಟವಾಗುತ್ತಿತ್ತು. ಗಂಡಿನದೇ ಮರ್ಯಾದೆ ಹೋಗುತ್ತಿತ್ತು. ಅದನ್ನು ಕೃಷ್ಣನ ಮೂಲಕ ಮುಚ್ಚಿಕೊಳ್ಳಲಾಯಿತು.

ಮಾದ್ರಿ ಚಿತೆ 'ಏರಿದ್ದನ್ನು ಪರಾಶರ ಮತ್ಸ್ಯಗಂಧಿ ನಿಗೆ, ಸೂರ್ಯ ಕುಂತಿಗೆ ಕನ್ಯತ್ವವನ್ನು ಕರುಣಿಸಿದ್ದನ್ನು, ದೂರ್ವಾಸ ಕುಂತಿಗೆ, ವ್ಯಾಸ ಗಾಂಧಾರಿಗೆ ಪುತ್ರ ಸಂತಾನಕ್ಕೆಂದು ಮಂತ್ರಾವಳಿಗಳನ್ನು ಕರುಣಿಸಿದ್ದನ್ನು, ಭೀಮ ದ್ರೌಪದಿಯ ಪ್ರತಿಜ್ಞೆಯನ್ನು ಪೂರೈಸಿದ್ದನ್ನು, ಕೃಷ್ಣ ಕರ್ಣನನ್ನು ನಿಸ್ತೇಜಗೊಳಿಸಲು ಕುಂತಿಯನ್ನು ಬಳಸಿದ್ದನ್ನು ಮತ್ತು ಕುರುಕ್ಷೇತ್ರ ಯುದ್ಧದ ನಂತರ ಗಾಂಧಾರಿಗೆ ರಣರಂಗವನ್ನು ತೋರಿಸಿದ್ದನ್ನು ಪುರುಷನ ಇಂಥ ಮಾಯಾವೀತನದ ಹಿನ್ನೆಲೆಯಲ್ಲಿಯೇ ಗಮನಿಸಬೇಕು.

ಪಾಂಡವ ಕೌರವರು ಜಯಕಾಮಿನಿಗಾಗಿ ಕಾದು ನಾಶ ಹೊಂದುತ್ತಿದ್ದಾಗ ತಮ್ಮ ಅಸಹಾಯಕ ಸ್ಥಿತಿಗಳಲ್ಲಿ ಬಾಯನ್ನು, ಬಸುರನ್ನು ಹೊಯ್ದುಕೊಂಡು ಈ ಸ್ತ್ರೀಯರು ಗೋಳಾಡಬೇಕಾಯ್ತು. ವಿಜಯಾಂಗನೆಯನ್ನು ದ್ರುಪದ ಕುಮಾರಿಗೆ ಸವತಿಯನ್ನಾಗಿಸಲು ಹೋಗಿ ಶೋಕದಲ್ಲಿ ಇವರನ್ನು ತಳ್ಳಲಾಯಿತು. ಅವಳ ಮಾನಭಂಗದ ಸಮಯದಲ್ಲಿ ರಕ್ಷಿಸಲಾಗದ ಈ ಪುರುಷ ಪ್ರಭುಗಳು ಅದನ್ನು ತಮ್ಮ ಪ್ರತಿಷ್ಠೆಯ ಯುದ್ಧವನ್ನಾಗಿ ಮಾಡಿ ಕೊಂಡರು, ವಸುಧೆಯನ್ನು ಅರಸಿಯನ್ನಾಗಿ ಮಾಡಿ ಕೊಳ್ಳಲೊಲ್ಲಸುಗ ತಮ್ಮ ಅರಸಿಯನ್ನು ಪಾಂಡವರು ಶಾಕಿನಿ ಡಾಕಿನಿಯಾಗಿ ಕೀರ್ತಿಸಿದರು. ರಣರಂಗದಲ್ಲಿ ಕೃತಶತ್ರು ಪಕ್ಷರನ್ನು ವಿನಾಶ ಮಾಡಿ ದ್ರೌಪದಿಗೆ ರಕ್ತಸ್ನಾನ ಮಾಡಿಸಿದರು. ಇದೆಲ್ಲವನ್ನು ಪಾಂಡವರ ಮತ್ತು ಕೌರವರ ಕಥೆಯನ್ನಾಗಿ ಮಾಡಿಕೊಂಡು ದುಷ್ಟ ಶಿಕ್ಷೆ ಶಿಷ್ಟ ರಕ್ಷಣೆಯ ರೂಪಕಗಳಲ್ಲಿ ನಾವು ಒಪ್ಪಿಕೊಳ್ಳುತ್ತಲೇ ಬಂದಿದ್ದೇವೆ. ಮತ್ತು ಹಾಗೆ ಒಪ್ಪಿಸಲೆಂದೇ ಈ ಕಥೆಯನ್ನು ಪುರುಷ ಜಗತ್ತು ಬೆಳೆಸುತ್ತಲೇ ಇದೆ. ಆದ್ದರಿಂದ ಇಂಥ ಕಾವ್ಯಗಳಲ್ಲಿ ಮನುಷ್ಯರೆಂದರೆ ಗಂಡಸರೇ ಆಗಿದ್ದಾರೆ. ಸ್ತ್ರೀಯರೆಂದರೆ ಈ ಗಂಡಸರ ಸಂಗಮೋತ್ಸುಕ ತೆವಲುಗಳು ಮಾತ್ರ ಆಗಿದ್ದಾರೆ. ಈ ಕಾರಣದಿಂದಲೇ ತನ್ನ ದಾಸತ್ವವನ್ನು ಕುರಿತ ದ್ರೌಪದಿಯ ಪ್ರಶ್ನೆಗೆ 'ಏನೇ ಉತ್ತರ ಸಿಕ್ಕಿದ್ದರೂ ಅವಳಿಗೆ ಅನುಕೂಲವಾಗುತ್ತಿರಲಿಲ್ಲ. ಯಾಕೆಂದರೆ ಸ್ತ್ರೀಯದು ಶಸ್ತ್ರಹೀನ ಸ್ಥಿತಿ. ಆದರೆ ಈ ಪುರುಷರು '' ಸೋತವರ ಹೆಂಡತಿಯ ಅವಮಾನವನ್ನು ತುಂಬಿದ ಸಭೆಯಲ್ಲಿ ಮಾಡುವ ಆಗತ್ಯವಿರಲಿಲ್ಲ. 'ಒವಳ ಕುಲಸ್ತ್ರೀಯ ಮಾನಭಂಗ ಮಾಡಬೇಕೋ ಇಲ್ಲವೋ ಎಂಬ ಸುಲಭ ಪ್ರಶ್ನೆ ಇತ್ತು''. (ಇರಾವತಿ ಕರ್ವೆ — ಯುಗಾಂತ ಪುಟ 141) ಅವರೆದುರಿಗೆ. ಆದರೆ ದ್ರೌಪದಿಯ ಮಯಸಭೆಯ ನಗುವನ್ನು ದುರ್ಯೋಧನನ ಪ್ರತಿಷ್ಠೆಯ ಪ್ರಶ್ನೆಯನ್ನಾಗಿ

ಮಾಡಿಕೊಂಡದ್ದರಿಂದ ಇದರ ವಿವೇಚನೆಯನ್ನು ಹಿಂದಕ್ಕೆ ತಳ್ಳಲಾಯಿತು.

ಹೀಗೆ ಪುರುಷನ ಮರ್ಯಾದೆಯ ಪ್ರಶ್ನೆಯಾಗಿ ಪತಿವ್ರತಾ ಗುಣಗಳನ್ನು ಹೆಣ್ಣಿಗೆ ಒದಗಿಸಿಕೊಡುತ್ತಲೇ ಅವಳನ್ನು ತಮ್ಮ ನಾಶದ ಪ್ರತೀಕವಾಗಿಯೂ ಕಂಡ ಮೌಲ್ಯ ವ್ಯವಸ್ಥೆಯನ್ನೇ ಕರ್ನಾಟ ಭಾರತ ಕಥಾ ಮಂಜರಿಯೂ ಹೇಳುತ್ತದೆ. ಅದ್ದರಿಂದಲೇ ಪಾಂಡವರ ಐದು ಜನರ ಒಗ್ಗಟ್ಟನ್ನೂ ಬೆಸೆಯುವ ರೂಪದಲ್ಲಿ ಬಳಕೆಯಾದ ದ್ರೌಪದಿ ಕೌರವರ ನಾಶದ ಕಾರಣವಾಗಿಯೂ ವೈಭವಗೊಳ್ಳುತ್ತಾಳೆ. ಪುರುಷ ಪ್ರಧಾನ ನೆಲೆಯ ಇಂಥ ಹುನ್ನಾರಗಳನ್ನು ವೇಷಗಳನ್ನು ಸ್ತ್ರೀಯನ್ನು ಗ್ರಹಿಸಿದ ವ್ಯಾಖ್ಯಾನಗಳ ಹಿನ್ನೆಲೆಯಲ್ಲಿ ಗಮನಿಸಿದರೆ ಇದರ ಸ್ವರೂಪ ಮತ್ತಷ್ಟು ಸ್ಪಷ್ಟವಾಗುತ್ತದೆ.

ಅಪಕೀರ್ತಿ, ದುರ್ದೆಸೆ, ಹೇಡಿತನ, ಭಗ್ನ ಮನಸ್ಸು, ಕೀರ್ತಿನಾಶ ಹೀಗೆ ಗಂಡಿನ ಅಪದೆಸೆಗಳ ಎಲ್ಲ ಕಾರಣಗಳನ್ನು ಸ್ತ್ರೀ ರೂಪದಲ್ಲಿಯೇ ಕಾಣಲಾಗಿದೆ: '' ಅಪಕೀರ್ತಿ ನಾರಿಯ ಮೆಚ್ಚದಿರು ಮರುಳಾಗದಿರು ಭೂಪಾಲ'' (ಸ:1-54) ಎಂದು ನಾರದ ಧರ್ಮರಾಯನಿಗೆ ಬೋಧಿಸುತ್ತಾನೆ. ಮತ್ತು ಮದ್ಯಪಾನ ಮಾಡುವ ದುರ್ಮಂತ್ರಿ, ಸೂಳೆಯರ ಅತುರ, ದುಶ್ಚರಿತರು ಇವರಲ್ಲದೆ ತರುಣಿಯಲ್ಲ ವಿಶ್ವಾಸವನ್ನು ತೋರಬೇಡವೆಂದು ಹೇಳುತ್ತಾನೆ. ಸತಿಯರ ಒಲುಮೆಯಲ್ಲಿ ಇರುವವರನ್ನು ವಿಟರುಗಳೆಂದು ಕರೆಯುತ್ತಾನೆ. ಧನವೊಂದಿದ್ದರೆ ಧಾರುಣಿ ಮಾನ್ಯ'' ಮೇಣಾಧನದಿ ಕಾಂತೆಯರ-ಖಿಳ ವಸ್ತುಗಳೈದೆ ನೆರುವುದು'' (ಸ:1-70) ಎಂದು ಇತರ ವಸ್ತುಗಳ ಜೊತೆ ಹೆಣ್ಣನ್ನು ಸಮೀಕರಿಸುತ್ತಾನೆ. ಇಂಥ ಅನೇಕ ನೀತಿ ಪ್ರಸಂಗಗಳನ್ನು ಕುಮಾರವ್ಯಾಸ ಭಾರತದಲ್ಲಿ ಗುರುತಿಸಬಹುದು

ಗಮನಿಸಿ : '' ಚಿಂತಾ ಮಹಿಳೆಗವಸರವಲ್ಲ ಮನಮಾಡೆಂದನೆಸುರಾರಿ'' (ಸ:2-31)

'' ಮಣಿವರಲ್ಲರಸುಗಳು ಮಾಡದೆ
ಮಣಿದವಾದರೆ ಕೀರ್ತಿಕಾಮಿನಿ
ಕುಣಿಪಳೈ ತ್ರೈಜಗದ ಜಿಹ್ವಾರಂಗ ಮಧ್ಯದಲಿ
ಬಣಗುಗಳು ನಾವೆಂದು ನಾಕದ
ಗಣಿಕೆಯರು ನಗುವರು ..........'' (ಸ:3-8)

'' ಅಕೀರ್ತಿ ವಧೂಟಿ ಕುಣಿವಳೆ
ಜನದ ಜಿಹ್ವಾರಂಗದಲಿ ಹಾ
ಯೆನುತ ತಲೆದೂಗಿದನು ಘನ ಶೌರ್ಯಾನುಭಾವದಲಿ'' (ಸ:3-9)

ಇಂಥ ಮಾತುಗಳು ಪುರುಷನ ನಡಾವಳಿಗಳನ್ನು ಕೀರ್ತಿಸುವ ಕಾರಣಕ್ಕಾಗಿಯೇ ಸೃಷ್ಟಿಯಾಗಿವೆ. ಅದಕ್ಕಾಗಿಯೇ ಅರ್ಜುನನನ ಗೆಲುವಿಗೆ ಬಹುಮಾನವಾಗಿ ಸುದತಿಯರು, ಉತ್ತಮಾಂಗನೆಯರು ದೊರೆಯುತ್ತಾರೆ. ಮತ್ತು ಅವನ ಈ ಜಯವನ್ನು ಸ್ತ್ರೀ ಕಟಕದ ಮೂಲಕವೇ ಕೊಂಡಾಡಲಾಗುತ್ತದೆ. ರಾಜಸೂಯಾಗಕ್ಕಾಗಿ ಪಾಂಡವರು ಮೇದಿನಿಯನ್ನು ಗೆಲ್ಲಲು ಹೊರಟ ಸಂದರ್ಭದಲ್ಲಿ ಸಭಾಪರ್ವದ ಐದನೇ ಸಂಧಿಯಲ್ಲಿ ಬಂದ ಒಂದು ಉಪ ಕಥೆ ಹೀಗಿದೆ. ಪೂರ್ವದಲ್ಲಿ ಹಲವಾರು ಕಾಮಲಾಯತಾಕ್ಷಿಯರಿದ್ದರು. ಅಗ್ನಿ ಅವರನ್ನು ಮೆಚ್ಚಿದ ಮತ್ತು ದ್ವಿಜವೇಷದಲ್ಲಿ ಬಂದು ಆ ವಧುಗಳೊಡನೆ ಇದ್ದ. ಆವಾಗ ನಗರವನ್ನು ಕಾಯುವವರು ಹಾದರವನ್ನು ಹಿಡಿದರು. ಆಗ ಅಗ್ನಿ ತನ್ನ ನಿಜರೂಪವನ್ನು ತೋರಿದ. ಧರಣಿಯ ರಾಜರುಗಳು ಬಂದು ಅವನ ಪಾದಕ್ಕೆ ಬಿದ್ದು, ಬೇಡಿಕೊಂಡು ಕೋಪಸ್ತಂಭನ ಮಾಡಿದರು. ಅಗ್ನಿ ಅಂದಿನಿಂದ ಕಾಮಿನಿಯರಿಗೆ 'ಹಾದರ ಸಲುವುದು' ಎಂದು ವರವನ್ನು ಕೊಟ್ಟ. ಸ್ತ್ರೀ ಹೇಗೆ ನಡೆದುಕೊಳ್ಳಬೇಕೆಂಬುದರ ನಿರ್ದೇಶನ ಗಂಡಿನ ಮೂಲಕ ಹೇಗೆ ನಡೆದಿದೆ ಎಂಬುದನ್ನು ಈ ಕಥೆ ಸ್ಪಷ್ಟಪಡಿಸುತ್ತದೆ.

ಈ ಹಿನ್ನೆಲೆಯಲ್ಲಿ ದ್ರೌಪದಿ ಸತ್ಯಭಾಮೆಯರ ಮಾತುಗಳನ್ನು ಗಮನಿಸಿದರೆ ಅವು ಕೇವಲ ಸ್ತ್ರೀ ಸ್ವಭಾವದ ವೈಶಿಷ್ಟ್ಯವನ್ನು ತಿಳಿಯಲು ಮುಖ್ಯವಾಗಿರದೆ ಪುರುಷ ಜಗತ್ತಿನ ಒತ್ತಡಗಳನ್ನು ಪ್ರಕಟಿಸುತ್ತವೆ. ಸತ್ಯಭಾಮೆ ದ್ರೌಪದಿಯನ್ನು '' ನೀನೈವರಿಗೆ ಸತಿ ವಲ್ಲಭರ ಚಿತ್ತಾಕರ್ಷಣವು ನಿನಗೆಂತು ನೇರಿಹುದು ಏಕಭಾವದಲಿ '' ಮತ್ತು '' ನೃಪರ ಈ ಯಂತ್ರ ಸೂತ್ರದ ಕುಣಿಕೆ ಯಾವುದು '' ಎಂದು ಕೇಳುತ್ತಾಳೆ. ದ್ರೌಪದಿ ನಾನು ಭಾವಶುದ್ಧಿಯಲಿ ಐವರನು ಸಂಭಾವಿಸುವೆನು ಎಂದು ಹೇಳಿ '' ಇನ್ನವರು ಧರ್ಮಶೀಲರು. ದಿಟ್ಟರಲ್ಲ ಮನೋಜ ಕೇಳಿಯಲಿ '' ಎಂದು ಕೃಷ್ಣನೊಂದಿಗಿನ ಸತ್ಯಭಾಮೆಯ ಸಂಬಂಧವನ್ನು ಗೇಲಿ ಮಾಡುತ್ತಾಳೆ. ಮತ್ತು '' ಬಿಗಡ ವಿಟರುಗಳ ರಸರಪಸರವನ್ನು ಅರಿಯಬಾರದು '' ಎನ್ನುತ್ತಾಳೆ.

ಹೀಗೆ ಹೆಣ್ಣಿನ ಪ್ರತಿಯೊಂದು ಕ್ರಿಯೆ ಮತ್ತು ವರ್ತನೆಗಳ ಹಿಂದೆಯೂ ಪುರುಷನ ಒತ್ತಡವನ್ನು ವಿವರಿಸಿಕೊಳ್ಳಲು ಸಾಧ್ಯವಿದೆ. ಇಡೀ ಸಮಾಜ ವ್ಯವಸ್ಥೆ ಇಂಥ ಒತ್ತಡಗಳಲ್ಲಿ ಸ್ತ್ರೀಯನ್ನು ಬಂಧಿಸಿರುವ ಕಥೆಯನ್ನೇ ಕುಮಾರವ್ಯಾಸ ಭಾರತವೂ ಹೇಳುತ್ತದೆ. ಸ್ತ್ರೀ ಪರವಾದ ವರಗಳು ವೈಫಲ್ಯಗೊಳ್ಳುವುದು, ಅಂಬೆಯ ಜೊತೆಗೆ ಭೀಷ್ಮ, ದ್ರೌಪದಿ ಮಾತಿಗೆ ಇಡೀ ಸಭೆ,ಪ್ರಾಯೋಪವೇಶ ಸಂದರ್ಭದಲ್ಲಿ ಭಾನುಮತಿಯ ಮಾತಿಗೆ ಸುಯೋಧನ ಒಪ್ಪಿದಿರುವುದು ಈ ಅಂಶವನ್ನೇ ಸ್ಪಷ್ಟಪಡಿಸುತ್ತದೆ. ಅಲ್ಲದೆ ದ್ರೌಪದಿ ಧೃತರಾಷ್ಟ್ರನಿಂದ ಪಡೆದ ವರಗಳು ವಿಫಲಗೊಂಡು ವನವಾಸವನ್ನು ಸೇರುವಂತಾದರೆ,ಊರ್ವಶಿಯ ಶಾಪ ಅರ್ಜುನನಿಗೆ ಅಜ್ಞಾತವಾಸದ ಸಂದರ್ಭದಲ್ಲಿ ವರವಾಗಿ ಸಹಕರಿಸುತ್ತದೆ. ಬದಲಾಗಿ ಇಲ್ಲಿನ ಸ್ತ್ರೀಯರ ನೋವುಗಳು ಮಾತ್ರ ವಾಸ್ತವವಾಗಿ ಕಾಣತೊಡಗುತ್ತವೆ. ಒಟ್ಟಿನಲ್ಲಿ ಹೆಣ್ಣನ್ನು ರಾಜಪ್ರಭುತ್ವ ಮತ್ತು ಪುರುಷ ಪ್ರಭುತ್ವಗಳಿಗಾಗಿ ಬಗ್ಗಿಸಿ ತಿದ್ದುವುದರಲ್ಲೇ ಕಾವ್ಯವು ಸ್ತ್ರೀಯ ಅಸ್ತಿತ್ವವನ್ನು ನಿರಾಕರಿಸಿದೆ ಎಂದರೆ ಅತಿಶಯೋಕ್ತಿಯಲ್ಲ. ಆದ್ದರಿಂದಲೇ

ಅರಸುಗಳಿಗಿದು ವೀರ
ದ್ವಿಜರಿಗೆ ಪರಮ ವೇದದ ಸಾರ
ಯೋಗೀಶ್ವರರ ತತ್ವ ವಿಚಾರ
ಮಂತ್ರಿಜನಕ್ಕೆ ಬುದ್ಧಿ ಗುಣ
ವಿರಹಿಗಳ ಶೃಂಗಾರ
ವಿದ್ಯಾಪರಿಣತರ ಅಲಂಕಾರ ( ಆ: 1-19)

ವಾಗಿ ಕಾಣತೊಡಗುತ್ತದೆ.

## ಶಾಪ — ವರ — ಪ್ರತಿಜ್ಞೆ

ಕನ್ನಡ ಭಾರತದ ಕಥೆ ಶಾಪದ ಪರಿಣಾಮದಿಂದಲೇ ಪ್ರಾರಂಭವಾಗುತ್ತದೆ. ಬ್ರಹ್ಮನ ಶಾಪದಿಂದ ಶಂತನ ಅರಸಿಯಾದ ಗಂಗೆ ವಸಿಷ್ಠನ ಶಾಪದಲ್ಲಿ ಎಂಟು ಮಕ್ಕಳ ತಾಯಿಯಾಗುತ್ತಾಳೆ. ಶಂತನನೊಂದಿಗೆ ಮಾಡಿಕೊಂಡ ಕರಾರಿನಿಂದಾಗಿ ನಿರಪರಾಧಿಗಳಾದ 'ಏಳು ಮಕ್ಕಳು ಅವಳಿಂದಲೇ ಮರಣವನ್ನು ಕಾಣುತ್ತಾರೆ. ಭೀಷ್ಮನನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿ ಅವರಿಬ್ಬರ ಕರಾರು ಮುರಿಯುತ್ತದೆ. ಸಂಬಂಧ ಕಡಿಯುತ್ತದೆ. ಹೀಗೆ ಮುರಿದ ಸಂಬಂಧ ಭೀಷ್ಮನ ಒಂಟಿತನದ ಚರಿತ್ರೆಯಾಗುವುದನ್ನು ಇಡೀ ಭಾರತ ಹೇಳುತ್ತದೆ. ತಂದೆಯ ವಿರಹದ ಕಿಚ್ಚನ್ನು ಆರಿಸಲು ಮತ್ಸ್ಯಗಂಧಿನಿಯನ್ನು ತರುವಾಗ '' ನಾರಿಯರಾದವರು ಭಾಗೀರಥಿಗೆ ಸರಿ. ಮೇದಿನಿಯ ಸಲಹುವನು ನಿನ್ನಯ ಮಗಳ ಮಕ್ಕಳಿಗೆ '' ಎಂದು ಮತ್ಸ್ಯಗಂಧಿನಿಯ ತಂದೆಯಲ್ಲಿ ಪ್ರತಿಜ್ಞೆ ಕೈಗೊಂಡ ಭೀಷ್ಮ ಮುಂದೆ ಭರತ ವಂಶದ ಉತ್ತರಾಧಿಕಾರದ ಕಾರಣಕ್ಕಾಗಿ ಉಂಟಾಗುವ ಅನೇಕ ಶಾಪ — ವರ — ಪ್ರತಿಜ್ಞೆಗಳಿಗೆ ಮೂಲ ಬೀಜವಾಗುತ್ತಾನೆ. ಇರಾವತಿ ಕರ್ವೆಯವರು ಹೇಳುವಂತೆ '' ಭೀಷ್ಮನ ತ್ಯಾಗ ಪ್ರತಿಫಲಕ್ಕಾಗಿ ಇರಲೇ ಇಲ್ಲ. ಅವನೊಬ್ಬ ಶಾಪಿತ ಜೀವಿಯಾಗಿದ್ದನು '' ಮತ್ತು ಇದರಿಂದಾಗಿ '' ಅಂಬಾ, ಅಂಬಿಕೆ, ಅಂಬಾಲಿಕಾ, ಗಾಂಧಾರಿ, ಕುಂತಿ, ಮಾದ್ರಿ ಮೊದಲಾದ ಈ ಹೆಂಗಸರ ಕರುಳುಗಳು ಎಷ್ಟೊಂದು ನೊಂದಿರಬೇಕು? ಅವರ ಅವಮಾನಕ್ಕೆ ಭೀಷ್ಮನೇ ಕಾರಣನಲ್ಲವೇ? ಭೀಷ್ಮನು ಕುರುವಂಶದ ಅಧಿಕಾರಿ ಪುರುಷನಿದ್ದನು. ವಂಶಾಭಿವೃದ್ಧಿಗಾಗಿ ಈ ಕುಲಸ್ತ್ರೀಯರ ಮಾನಹಾನಿಯನ್ನು ಮಾಡಿದಂತಾಯಿತು ''. (ಪುಟ 24). ಈ ಕಾರಣದಿಂದಾಗಿ ಇಲ್ಲಿನ ಸ್ತ್ರೀ ಯಾವುದೇ ವೈರುಧ್ಯಗಳನ್ನು ಎದುರಿಸದ, ಬದುಕಿನ ದ್ವಂದ್ವಗಳಲ್ಲಿ ತನ್ನ ಅಸ್ತಿತ್ವವನ್ನು ಸ್ಥಾಪಿಸಲಾಗದ, ಗಂಡಿನ ದರ್ಪದ, ಅಹಂಕಾರದ, ಆಸ್ತಿಯಾಗಿದ್ದಾಳೆ. ಮೀನ ಬಸುರಲ್ಲಿ ಹುಟ್ಟಿದ ಮತ್ಸ್ಯಗಂಧಿನಿ ಮುಂದೆ ತಾನು ಕ್ರಮಬದ್ಧವಲ್ಲದ ಬಸುರುಗಳಿಗೆ ಒಳಗಾಗುತ್ತಾಳೆ. ಪರಾಶರ ತಾನು ಕಲಿತ ವೇದಾಧ್ಯಯನದ ಉತ್ತರಾಧಿಕಾರಕ್ಕಾಗಿ ಅವಳಿಂದ ವ್ಯಾಸನನ್ನು ಪಡೆಯುತ್ತಾನೆ. ಶಂತ ರಾಜ್ಯಕ್ರಮದ ಉತ್ತರಾಧಿಕಾರಕ್ಕಾಗಿ ವಿಚಿತ್ರವೀರ್ಯ, ಚಿತ್ರಾಂಗದರನ್ನು ಪಡೆಯುತ್ತಾನೆ. ವೇದ ವ್ಯಾಸನನ್ನು ಹೆತ್ತು ಪರಾಶರನಿಂದ ಕನ್ಯತ್ವದ ವರವನ್ನು ಪಡೆದ ಸತ್ಯವತಿ ಮುಂದೆ ತನ್ನ ಮಕ್ಕಳಾದ ವಿಚಿತ್ರವೀರ್ಯ — ಚಿತ್ರಾಂಗದರು ಸತ್ತ ನಂತರ ರಾಜ್ಯವನ್ನು ಭೀಷ್ಮ ' ಎಲವದ ಕಾಯಿ' ಯಾಗಿ ಕಂಡದ್ದರಿಂದ ವ್ಯಾಸನನ್ನು ಕರೆದು ಸೊಸೆಯರಾದ ಅಂಬಿಕೆ, ಅಂಬಾಲಿಕೆಯರಲ್ಲಿ ನಿಯೋಗದ

ಮೂಲಕ ಉತ್ತರಾಧಿಕಾರಿಗಳನ್ನು ಪಡೆಯುತ್ತಾಳೆ. '' ನೆನೆ ವಿಪತ್ತಿನೊಳು '' ಎಂದು ವ್ಯಾಸ ಕೊಟ್ಟಿದ್ದ ವರವನ್ನು ಸಾರ್ಥಕಗೊಳಿಸುತ್ತಾಳೆ.

ಹೀಗೆ ಹೆಣ್ಣು ಇಲ್ಲಿ ಗಂಡಿನ ಚರಿತ್ರೆಯನ್ನು ಮುಂದುವರೆಸುವ ಮೂಲ ಬೀಜಗಳ ಮೊಳಕೆಯ ಕ್ಷೇತ್ರವಾಗುತ್ತಾಳೆ. ಇದಕ್ಕಾಗಿ ಗಂಡು ಅವಳನ್ನು ಒಲಿಸಬಲ್ಲ, ಒಲಿಯದಿದ್ದಾಗ ಆಕ್ರಮಣವನ್ನು ನಡೆಸಿ ತನ್ನ ಆಸ್ತಿಯನ್ನಾಗಿ ಮಾಡಿಕೊಳ್ಳಬಲ್ಲ. ಇಲ್ಲಿ ಪರಾಶರ ಮತ್ಸ್ಯಗಂಧಿನಿಯನ್ನು ಒಲಿಸಿದರೆ, ಭೀಷ್ಮ ಮದುವೆ ಮನೆಗೆ ನುಗ್ಗಿ ಆಕ್ರಮಣ ನಡೆಸಿ (ವಿಚಿತ್ರ ವೀರ್ಯನಿಗಾಗಿ ) ಅಂಬೆ, ಅಂಬಿಕೆ, ಅಂಬಾಲಿಕೆಯರನ್ನು ಹಿಡಿದು ತರುತ್ತಾನೆ. ವಿಚಿತ್ರವೀರ್ಯ ಚಿತ್ರಾಂಗದರ ಅವರ ನಾಮಕರಣದಿಂದ ಪ್ರಾರಂಭವಾಗಿ ಅವರ ಮದುವೆ, ರಾಜ್ಯ ಪಟ್ಟದ ತನಕ, ಭೀಷ್ಮನೇ ಸೂತ್ರದಾರನಾಗಿದ್ದಾನೆ. ವಿಚಿತ್ರವೀರ್ಯ ಅಂಬಿಕೆ — ಅಂಬಾಲಿಕೆಯರನ್ನು ರಮಿಸಿದರೂ ಅಂಬೆ ಮಾತ್ರ ತನ್ನನ್ನು ಸೆಳೆದು ತಂದ 'ಭೀಷ್ಮನನ್ನೇ ಗಂಡನೆಂದು ಭಾಷೆಯ ಮಾಡಿ' ನಿಲ್ಲುತ್ತಾಳೆ. ಮತ್ತು '' ಭೀಷ್ಮನ ಕೂಟವಲ್ಲದೆ ಮರಣದಲ್ಲಾದರೂ ಅವನೊಡನೆ ಬೆರೆಸಿದಲ್ಲದೆ ಪಂಥವಿಲ್ಲ'' ಎಂದು ಪ್ರತಿಜ್ಞೆ ಮಾಡುತ್ತಾಳೆ. ತನಗೆ ಬೇಕಾದಂತೆ ಹೆಣ್ಣನ್ನು ಬಳಸಿಕೊಳ್ಳುವ ರಾಜತ್ವದ ದರ್ಪವನ್ನು ಅಂಬೆ ಪ್ರಶ್ನಿಸುತ್ತಾಳೆ. ನೈತಿಕ ಸಂಬಂಧವನ್ನು ಸಾಧಿಸಲಾಗದ ಭೀಷ್ಮನ ಅಹಮ್ಮಿಕೆಗೆ ಮುಂದೆ ಮರಣದ ರೂಪವಾಗಿ ಪರಿವರ್ತನೆಗೊಳ್ಳುತ್ತಾಳೆ. ಹೀಗೆ ಶಾಪ — ವರ — ಪ್ರತಿಜ್ಞೆಗಳಿಂದ ಪ್ರಾರಂಭಗೊಂಡ ಈ ಚಂದ್ರ ವಂಶ ಪರಂಪರೆ ಮುಂದೆ ರಾಜ್ಯದ ಒಡೆತನಕ್ಕಾಗಿ ಬಡಿದಾಡುವ, ಒಬ್ಬರನ್ನೊಬ್ಬರು ಹಿಂಸಿಸುವ, ದಾಯಾದಿ ಕಲಹಗಳ ಘೋರ ಪರಿಣಾಮದಲ್ಲಿ ಪರ್ಯವಸಾನಗೊಳ್ಳುತ್ತದೆ.

ಇದರ ಮತ್ತೊಂದು ಬಗೆಯನ್ನು ಧೃತರಾಷ್ಟ್ರ ಮತ್ತು ಪಾಂಡುವಿನಲ್ಲಿ ಕಾಣಬಹುದು. ಕ್ರಮಬದ್ಧ ಸಂಬಂಧವಿಲ್ಲದ ಗಂಡು ಹೆಣ್ಣುಗಳಲ್ಲಿ ಹುಟ್ಟಿದ ರೋಗಗ್ರಸ್ಥ ಪಾಂಡು, ದೃಷ್ಟಿಹೀನ ಧೃತರಾಷ್ಟ್ರ ಅಂತಹ ನೈತಿಕ ಸಂಬಂಧವೊಂದರಿಂದ ಹೊರಗಡೆಯೇ ಉಳಿಯುತ್ತಾರೆ. ಅಂಬೆ — ಅಂಬಿಕೆ — ಅಂಬಾಲಿಕೆಯರ ಪರಂಪರೆ, ಮತ್ತೊಂದು ರೀತಿಯಲ್ಲಿ ಕುಂತಿ — ಗಾಂಧಾರಿಯ ಮೂಲಕ ಮುಂದುವರೆಯುತ್ತದೆ. ಪಾಂಡು ಮೃಗ ರೂಪಿನಲ್ಲಿ ಕೂಡಿದ ಋಷಿ ದಂಪತಿಗಳನ್ನು ಕೊಂದು ಶಾಪಕ್ಕೆ ಬಲಿಯಾಗಿ ತನ್ನ ಸಂಬಂಧ ರಹಿತ ಸ್ಥಿತಿಯಲ್ಲಿ ಕುಂತಿ ಮಾದ್ರಿಯರಲ್ಲಿ ಮಕ್ಕಳನ್ನು ಪಡೆಯುತ್ತಾನೆ. ಧೃತರಾಷ್ಟ್ರ ವೇದವ್ಯಾಸನಿತ್ತ ಮಂತ್ರ ಸಿದ್ಧಿಯಿಂದಲೇ ನೂರಾರು ಜನ ಮಕ್ಕಳನ್ನು ಪಡೆದರೂ ಯುಯುತ್ಸುವನ್ನು ವೇಶ್ಯಾಂಗನೆಯಲ್ಲಿ ಪಡೆಯುವುದರ ಮೂಲಕ ಸಾರ್ಥಕಗೊಳ್ಳುತ್ತಾನೆ. ಇವೆಲ್ಲವೂ ಸಹ ಹೆಣ್ಣಿನೊಂದಿಗಿನ ಗಂಡಿನ ಜವಾಬ್ದಾರಿರಹಿತ ಸಂಬಂಧಗಳು. ಇವು ಮತ್ತೆ ಮತ್ತೆ ಇಂತಹ ಪ್ರಕ್ರಿಯೆಗಳನ್ನು ಬೆಳೆಸುತ್ತಾ ಹೋಗುತ್ತವೆ. ವ್ಯಾಸನ ರೌದ್ರಾವತಾರ ದರ್ಶನವನ್ನು ಕಂಡ

ಅಂಬಿಕೆ ತನ್ನ ಕಣ್ಣುಗಳನ್ನು ಭಯದಿಂದ ಮುಚ್ಚಿಕೊಳ್ಳುವಲ್ಲಿ, ಅಂಬಾಲಿಕೆಯು ಮುಖ ಬಿಳುಪಿನಿಂದ ಮಸಗುವಲ್ಲಿ, ಈ ಪ್ರಕ್ರಿಯೆಯು ಅಸಮತೆ ಗಂಡಿನ ದರ್ಪವಾಗಿ ಪ್ರಕಟಗೊಳ್ಳುವುದು ಕಾಣುತ್ತದೆ. ಅಂಬೆ ಭೀಷ್ಮನೆದುರು ಶಿಖಂಡಿಯಾಗಿ ನಿಲ್ಲುವಲ್ಲಿ '' ಕುಂತಿ ಭೋಜನ ಒಡೆತನ ಬೆಂದುಹೋಗಲಿ,'' ಎಂಬ ಮುನಿಯ ಶಾಪವನ್ನು ಕುಂತಿ ತಡೆಯುವಲ್ಲಿ, ಸತ್ಯವತಿ ಪರಾಶರನಿಂದ ಕುಂತಿ ಸೂರ್ಯನಿಂದ ಮಕ್ಕಳನ್ನು ಪಡೆದರೂ ಮುನ್ನಿನ ಕನ್ಯತನ ಕೆಡದಿರಲಿ,'' ಎಂಬ ವರವನ್ನು ಪಡೆಯುವಲ್ಲಿ ಗಂಡಿನ ಪ್ರಭುತ್ವ ತಾನೇ ತಾನಾಗಿ ವಿಜೃಂಭಿಸುವುದನ್ನು ಪ್ರಕಟಪಡಿಸುತ್ತದೆ. ಮತ್ತು ಕೌರವ ಪಾಂಡವರ ಹೋರಾಟಕ್ಕೆ ಮುಂದೆ ದ್ರೌಪದಿಯನ್ನು ಕಾರಣವಾಗಿಸುವಲ್ಲಿ ಬಿಟ್ಟವಾಗುತ್ತದೆ.

ಈ ಚರ್ಚೆಯನ್ನು ಮುಂದುವರೆಸಿದರೆ ಕೌರವ ಪಾಂಡವರ ಹೋರಾಟದ ಮೂಲ ಕಾರಣವಾಗುವ ದ್ರೌಪದಿಯ ಪಾತ್ರ ಹಲವಾರು ಪ್ರಶ್ನೆಗಳನ್ನು ನಮ್ಮ ಮುಂದಿಡುತ್ತದೆ. ದುರ್ಗಾಭಾಗವತ ಹೇಳುವಂತೆ '' ದ್ರೌಪದಿಯು ಆ ಸಂಘರ್ಷದ ಕೇಂದ್ರಬಿಂದುವಾಗಿದ್ದಿಲ್ಲ. ರಾಜಸತ್ತೆಯು ಅದರ ಕೇಂದ್ರ ಬಿಂದು ವಾಗಿತ್ತು. (ಪುಟ 169).

ದ್ರುಪದ ಪಾರ್ಥನಿಗಾಗಿಯೇ ಮಗಳನ್ನು ಮೀಸಲಿರಿಸುತ್ತಾನೆ. ಗಂಡಿಗಾಗಿ ಹೆಣ್ಣನ್ನು ಮೀಸಲಿಡುವ ಈ ದರ್ಪ ಪಾಂಡವರು ಐದೂ ಜನರು ಸತಿಯನ್ನಾಗಿಸಿಕೊಂಡು, ದ್ರೌಪದಿಯ 'ಇಡೀ ವ್ಯಕ್ತಿತ್ವವನ್ನೇ ಛಿದ್ರಗೊಳಿಸುವಲ್ಲಿ, ಅವಳನ್ನು ಅಬಲೆಯಾಗಿಸುವಲ್ಲಿ, ಮೆರೆಯುತ್ತದೆ. ದ್ರೌಪದಿ ಯನ್ನು ಗೆಲಿದು ತಂದ ಅರ್ಜುನ ತಾಯಿಗೆ ಒಂದು ವಸ್ತುವನ್ನು ತಂದಂತೆ ವಿವರಿಸುತ್ತಾನೆ.' '' ಅನುಪಮಿತ ಮೌಲ್ಯವನ್ನು ಅಮಲ ಮೌಕ್ತಿಕವನ್ನು ತಂದೆ'', ಎನ್ನುತ್ತಾನೆ. ಇಲ್ಲಿ ಕುಂತಿ, '' ಲೇಸಾಯ್ತು, ಐವರು ಕೂಡಿ ಭೋಗಿಸುವುದು'' ಎನ್ನುವ ಮಾತು ಸಹ ಅವರಿಗೆ ವರವಾಗಿಯೇ ಪರಿಣಮಿಸುತ್ತದೆ. ಮತ್ತು ಗಂಡು ಮಕ್ಕಳ ನಡುವಿನ ಸಂಬಂಧದ ಒಡಕನ್ನು ಮುಚ್ಚುವ ಸಾಧನವಾಗಿ ಮಾತ್ರ ದ್ರೌಪದಿ ಆಕೆಯ ಬದುಕಿನ ವಿಪರ್ಯಾಸವೂ ಆಗುತ್ತಾಳೆ.

ಹೀಗೆ ಆಸ್ತಿಯಂತೆ, ಸ್ವಯಂವರದಲ್ಲಿ ಅಣ್ಣತಮ್ಮಂದಿರು ಅವಳನ್ನು ಹಂಚಿಕೊಂಡರು, "ಆದರ ಆಳದಲ್ಲಿ ಕುಂತಿಯು ಆತಿಗಿಂತಲೂ ಆಕೆಯು ಒಬ್ಬನಿಗೇ ಹೆಂಡತಿಯಾದರೆ ಇತರರ ಮನಸ್ಸು ಕೆಡಬಹುದು, ಸೋದರರ ಒಗ್ಗಟ್ಟು ಒಡೆಯಬಹುದು ಹಾಗೆ ಆಗಬಾರದು ಎಂಬ ಕಾರಣವೇ ಹೆಪ್ಪುಗಟ್ಟಿ ಕುಳಿತಿತ್ತು" (ಪುಟ 169 ದುರ್ಗಾಭಾಗವತ). ಹೆಣ್ಣು ಬಳಕೆಗೊಳ್ಳುವ ಪ್ರವೃತ್ತಿ ಇಡೀ ಭಾರತದಲ್ಲಿ ಸ್ತ್ರೀಯ ದುರಂತ ಚರಿತ್ರೆಯನ್ನು ಹೇಳುತ್ತದೆ. ವನವಾಸದಲ್ಲಿದ್ದಾಗ, ಜಟಾಸುರ ಆಕ್ರಮಣ ಮಾಡಿ ನಕುಲ — ಸಹದೇವರನ್ನು ಸೋಲಿಸಿ ದ್ರೌಪದಿಯನ್ನು ಹಿಡಿಯುವುದು, ಜಯದ್ರಥ ದ್ರೌಪದಿಯನ್ನು ಹಿಡಿದು ಎಳೆದುಕೊಂಡು ಹೋಗುವುದು, ಮತ್ತು ಕೀಚಕ ಆಕೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳಲು ನಡೆಸುವ ಪ್ರಯತ್ನಗಳು ಹೆಣ್ಣನ್ನು ಆಸ್ತಿಯನ್ನಾಗಿ ಪಡೆಯುವ ರೂಪಗಳಲ್ಲದೇ

ಬೇರೇನೂ ಅಲ್ಲ. ಉಪಕಥೆಯಾಗಿ ಬರುವ ದ್ರೌಪದಿ ಮತ್ತು ಪಾಂಡವರ ಪೂರ್ವ ಜನ್ಮದ ಚರಿತ್ರೆ ಸಹ ಇದನ್ನೇ ಸಮರ್ಥಿಸಿಕೊಳ್ಳುವ ಸಾಕ್ಷಿಯಾಗುತ್ತದೆ. ಇದನ್ನು ಗಮನಿಸಿ, ಮುನಿಯಿಂದ ತಿರಸ್ಕೃತಳಾದ ನಾರಾಯಣಿ ಈಶ್ವರನಲ್ಲಿ ವರ ಪಡೆಯುತ್ತಾಳೆ. ಆಕೆ ಪಂಚವಾಕ್ಯದಲ್ಲಿ ವರವನ್ನು ಬೇಡಿದ್ದರಿಂದ, ಪಂಚಪತಿಗಳಿಗೆ ನೀನು ಹೆಂಡತಿಯಾಗುವೆ, ಎಂದು ಈಶ್ವರ ವರ ಕೊಡುತ್ತಾನೆ. ಮತ್ತು ಇದರಿಂದ '' ನಾರಿ ಧರ್ಮಕ್ಕೆ ಕೇಡು ಬಾರದು. ನಿಮ್ಮ ನೆರೆ ಕೆಟ್ಟಾಡಿದರೆ, ಬಾಯಿ ಹುಳುವುದು '' ಎಂದು ಅವಳ ಆತಂಕಗಳಿಗೆ ಸಮಾಧಾನ ಹೇಳುತ್ತಾನೆ. ಈ ವರ ಮತ್ತು ಸಮಾಧಾನಗಳೆರಡೂ ಗಂಡಿನ ಪರವಾಗಿರುವುದನ್ನು ಪಾಂಡವರ ಸಂಬಂಧಗಳಲ್ಲಿ ಕಾಣುತ್ತೇವೆ.

ದ್ರೌಪದಿ ತನ್ನೆಲ್ಲ ಸಂಬಂಧಗಳನ್ನು ವರ್ಷಕ್ಕೊಬ್ಬನಂತೆ, ಪರಿವರ್ತಿಸಿಕೊಳ್ಳುತ್ತ ಹೋಗುವುದು, ಪಾಂಡವರು ಐದೂ ಜನರ ಗುಣಗಳಿಗೆ ಆಳಾದ ಆಕೆಯ ಅಸಹಾಯಕ ಅಸ್ತಿತ್ವವೇ ಆಗಿದೆ. ಅಕ್ಷಯ ವಸ್ತ್ರ ಪ್ರಸಂಗವನ್ನು ಇದರ ಮತ್ತೊಂದು ಉದಾಹರಣೆಯಾಗಿ ನೋಡಬಹುದು. ದುಶ್ಯಾಸನನಿಂದ ಸೆಳೆಯಲ್ಪಟ್ಟ ವಸ್ತ್ರ ಹಿರಿಯ ಸಭಾಸದರೆಲ್ಲರ ಮೌನದಲ್ಲಿ ಪುರುಷೋತ್ತಮನ ರೂಪವಾದ ಕೃಷ್ಣನಿಂದ ಅಕ್ಷಯವಾಗಿ ಅವಳ ಮಾನವನ್ನು ಮುಚ್ಚುತ್ತದೆ. ಇಲ್ಲಿ ದುಶ್ಯಾಸನ ದುರ್ಯೋಧನರು ತಮ್ಮ ದರ್ಪದ ಮೂಲಕ ದ್ರೌಪದಿಯ ಮೇಲೆ ತಮ್ಮ ಪ್ರಭುತ್ವವನ್ನು ಸಾಧಿಸಿದರೆ, ಕೃಷ್ಣ ಕರುಣೆಯ ಮೂಲಕ ಸಾಧಿಸುತ್ತಿದ್ದಾನೆ. ಭೀಷ್ಮ — ಕೃಪ, ದ್ರೋಣರಾದಿಯಾಗಿ ಎಲ್ಲಾ ಸಭಾಸದರು ಮೌನವಾಗಿ, ಇದನ್ನು ಒಪ್ಪಿಕೊಳ್ಳುವವರೇ ಆಗಿದ್ದಾರೆ. ಇಲ್ಲಿ ಕೃಷ್ಣನಂತೂ ಪರಿಪೂರ್ಣ ಗುಣಗಳ ಪುರುಷನಾಗಿ, ಪುರುಷೋತ್ತಮನಾಗಿ ಎಲ್ಲರಿಗೂ ಕಾಣತೊಡಗುತ್ತಾನೆ. ಆ ಸಭೆಯಲ್ಲಿ ದ್ರೌಪದಿ ದುರ್ಯೋಧನನಿಗೆ '' ನಿನ್ನಳಿವು ತೊಡೆಯಲ್ಲಿ ಮುಗಿವುದು '' ಎನ್ನುವ ಶಾಪ ಮುಂದೆ ಭೀಮನ ಪ್ರತಿಜ್ಞೆಯಲ್ಲಿಯೇ ಪೂರ್ಣಗೊಳ್ಳುವಂತಹುದಾಗಿದೆ. ನಂತರ ಪಾಂಡವರ ದಾಸ್ಯವನ್ನು ಕಳೆದು ಅವರಿಗೆ ಶಸ್ತ್ರಾಸ್ತ್ರಗಳು ದೊರಕುವಂತೆ ದ್ರೌಪದಿ ಧೃತರಾಷ್ಟ್ರನಿಂದ ವರವನ್ನು ಪಡೆದರೂ ಮತ್ತೆ ಮರು ದ್ಯೂತದಲ್ಲಿ ಅವರು ಸೋಲನ್ನನುಭವಿಸುವುದರ ಮೂಲಕ ಅವಳು ಪಡೆಯುವ ವರಕ್ಕೆ ಯಾವ ಶಕ್ತಿಯೂ ಇಲ್ಲವಾಗುತ್ತದೆ. ಹೀಗೆ ವರ ಮತ್ತು ಶಾಪಗಳೆರಡೂ ಇಲ್ಲಿ ಗಂಡಿನ ಪರವಾಗಿರುವುದನ್ನು ಗಮನಿಸಬೇಕು.

ಅರ್ಜುನನೊಂದಿಗೆ ಊರ್ವಶಿ ಪ್ರಸಂಗ ಸಹ ಅರ್ಜುನನ ಶೌಚ ಗುಣವನ್ನು ಮೆರೆಯಲೆಂದೇ ಮೀಸಲಾದುದು. '' ಭಾರತವರುಷಭೂಮಿಯೊಳು ಒಂದು ವರುಷಾಂತರ ನಪುಂಸಕನಾಗಿ ಚರಿಸು '' ಎಂಬ ಊರ್ವಶಿಯ ಶಾಪ ಅಜ್ಞಾತವಾಸದಲ್ಲಿ ಅರ್ಜುನನಿಗೆ ವರವಾಗಿಯೇ ಪರಿಣಮಿಸಿತು.*

ಹೀಗೆ ಶಾಪ — ವರ — ಪ್ರತಿಜ್ಞೆಗಳ ನೆಲೆಗಳಲ್ಲಿ ಸ್ತ್ರೀಯರನ್ನು ರಾಜ ಪ್ರಭುತ್ವ ಮತ್ತು ಪುರುಷ ಪ್ರಭುತ್ವಗಳು ಆಳಾಗಿ, ಆಸ್ತಿಯಾಗಿ, ನಡೆಸಿಕೊಳ್ಳುವ, ಅನೇಕ ಸಾಧ್ಯತೆಗಳು ಮಹಾಭಾರತದಲ್ಲಿ

ಕಾಣುತ್ತವೆ. ಇಡೀ ಭಾರತದಲ್ಲಿ ಭಿನ್ನವಾಗಿ ಕಾಣುವ ಕುಂತಿ — ಕರ್ಣರ ಪ್ರಸಂಗ ಸಹ ಇದಕ್ಕೆ ಹೊರತಾದುದೇನಲ್ಲ. ಇದೂ ಸಹ ಕೃಷ್ಣನ ಸಲಹೆಯಂತೆ ನಡೆಯುತ್ತದೆ ಎನ್ನುವುದನ್ನು ಮರೆಯಬಾರದು. "ತಮ್ಮಂದಿರನ್ನು ಪಾಲಿಸು" "ತೊಟ್ಟ ಬಾಣವ ಮರಳಿ ತೊಡದಿರು" ಎಂಬ ಕುಂತಿಯ ಮಾತುಗಳು ಪಾಂಡವರು ರಾಜ ಪ್ರಭುತ್ವವನ್ನು ಸಾಧಿಸುವ ಸಾಧನವಾಗಿಯೇ ಚಿತ್ರಿಸಲಾಗಿದೆಯೇ ಹೊರತೂ ತಾಯಿ ಮಕ್ಕಳ ಸಂಬಂಧದಲ್ಲಿ ಒದಗಬಹುದಾದ ಆತ್ಮೀಯತೆ, ಕರುಳುತನದ ವ್ಯಕ್ತಿತ್ವ ಕುಂತಿಯ ಪಾತ್ರಕ್ಕೆ ಇಲ್ಲಿ ಒದಗಿ ಬರುವುದಿಲ್ಲ. ಇದರ ಪರಿಣಾಮವನ್ನು ಗ್ರಹಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಸ್ತ್ರೀಯನ್ನು ಒಂದು ಕಡೆ ಪುರುಷ ಸಾಮ್ರಾಜ್ಯದ ಪಾಶವಾಗಿ, ಮತ್ತೊಂದು ನೆಲೆಯಲ್ಲಿ ಪುರುಷ ಸಾಮ್ರಾಜ್ಯದ ಸ್ಥಾಪನೆಯ ಕಾರಣವಾಗಿ ಮಾತ್ರ ಮಹಾಭಾರತ ಕಥೆ ನೋಡಿದೆ. ಕೌರವ ಪಾಂಡವರ ಪ್ರತಿಮೆಗಳ ಮೂಲಕ ಕನ್ನಡ ಭಾರತವೂ ಸಹ ಇದನ್ನೇ ಪ್ರಕಟಪಡಿಸುತ್ತದೆ.

## :: ಸಮಾರೋಪ ::

ಹಿಂದಿನ ಅಧ್ಯಾಯಗಳ ಚರ್ಚೆಯ ಹಿನ್ನೆಲೆಯಲ್ಲಿ ಕರ್ನಾಟಕ ಭಾರತ ಕಥಾಮಂಜರಿಯ ಸೂಕ್ಷ್ಮವಾದ, ಸಮಗ್ರವಾದ ಅಧ್ಯಯನದ ಅಗತ್ಯ ಸ್ಪಷ್ಟವಾಗುತ್ತದೆ. ಸ್ತ್ರೀವಾದಿ ಅಧ್ಯಯನದ ಆಕರವಾಗಿ ಈ ಕೃತಿಯು [illegible] ಓದುಗಳು ಇದುವರೆಗಿನ ಕನ್ನಡ ಸಾಹಿತ್ಯ ಪರಿಸ್ಥಿತಿಯನ್ನು ಈಗಿರುವ [illegible] ಭಿನ್ನವಾಗಿ ನಿರ್ವಹಿಸಿಕೊಳ್ಳುವ ಸಾಧ್ಯತೆಗಳನ್ನು ತೋರುತ್ತದೆ. ಇದರಿಂದಾಗಿ ಸಮಾಜ, ಸಂಸ್ಕೃತಿ ಆ ಮೂಲಕ ಸಾಹಿತ್ಯದ ನಿರ್ವಹಣದ ಕ್ರಮಗಳೂ ಬದಲಾಗಬೇಕಾದ ಅನಿವಾರ್ಯತೆಯನ್ನು ಇದು ಸ್ಪಷ್ಟಪಡಿಸುತ್ತದೆ. ಇದರೊಂದಿಗೆ ಈ ಹಿಂದೆಯೇ ಹೇಳಿದಂತೆ ನಮ್ಮ ಸಿದ್ಧ ವಿಮರ್ಶಾ ಮಾನದಂಡದ ರೀತಿಗಳು ಮತ್ತು ಇವುಗಳನ್ನು ಬಳಸಿ ಸಾಹಿತ್ಯವನ್ನು ಪುರುಷನಿಷ್ಠವಾಗಿಸಿಕೊಂಡ ವ್ಯಾಖ್ಯಾನಗಳು ಸಾಹಿತ್ಯದ 'ಏಕಮುಖಿ' ಪ್ರದರ್ಶನವಾಗಿರುವುದನ್ನು ಸ್ತ್ರೀವಾದ ಗುರುತಿಸುತ್ತದೆ.

ಕುಮಾರವ್ಯಾಸ ಭಾರತದ ಸ್ತ್ರೀ ಕಥೆಯನ್ನು ಓದಿದ ವೇಳೆ, ಯಾಕೆ ಹೆಣ್ಣನ್ನು, ಹೆಣ್ಣಿನ ಸಂಬಂಧಗಳನ್ನು ಪುರುಷ ಜಗತ್ತು ಇಷ್ಟೊಂದು ನೇತ್ಯಾತ್ಮಕವಾಗಿ ಕಂಡಿದೆ? ಪುರುಷನ ಈ ಕ್ರೌರ್ಯ ಅವನ ಎಂಥ ಅನಿವಾರ್ಯ ಪ್ರಕ್ರಿಯೆಯಿಂದ ಪ್ರಾರಂಭವಾಗಿದೆ ? ಅಥವಾ ಯಾವ ಅನಿವಾರ್ಯಗಳೂ ಇಲ್ಲದೆ ಕೇವಲ ಸ್ತ್ರೀಯ ಸಂತಾನ ಶಕ್ತಿಯ ಕಾರಣದಿಂದ ಮಾತ್ರ ಆಕೆಯನ್ನು ಹೀಗೆ ನಡೆಸಿಕೊಳ್ಳಲಾಯಿತೇ? ಒಡೆತನದ ಒತ್ತಡಗಳಿಗಾಗಿ ಮಾತ್ರ ಸ್ತ್ರೀಯೊಂದಿಗಿನ ಸಂಬಂಧಗಳು — ಬಹಳ ಮುಖ್ಯವಾಗಿ ಲೈಂಗಿಕ ಸಂಬಂಧಗಳು — ಮುಖ್ಯವಾಗಬೇಕೆ? ಈ ಪ್ರಶ್ನೆಗಳು ಕಾಡತೊಡಗುತ್ತವೆ. ಲೈಂಗಿಕ ಸಂಬಂಧಗಳಿಂದ ಮಾತ್ರ ಮನುಷ್ಯಳಾಗಿ ಕಾಣುವ ಹೆಣ್ಣು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಜವಾಬ್ದಾರಿಗಳಲ್ಲಿ, ಒತ್ತಡಗಳಲ್ಲಿ ಮುಖ್ಯವಾಗಿ ಕಾಣಲಿಲ್ಲ ಯಾಕೆ? ಅವಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಗಂಡಿನ ಕೈಯ [illegible]ಯಾಗಿಯೇ ಉಳಿಯಬೇಕಾಗಿ ಬಂದದ್ದು ಒಟ್ಟು ಮನುಷ್ಯ ಬದುಕಿನ ದುರಂತವೆ ಅಲ್ಲವೆ? ಇಂಥ ಪ್ರಶ್ನೆಗಳಿಗೆ ಉತ್ತರ ದ್ಯೂತ ಸಭೆಯ ಮಾನವಾಗಬಾರದು; ಅಥವಾ ಗಂಡಿನ ಕ್ರೌರ್ಯ ಅಥವಾ ಕರುಣೆಯಾಗಬಾರದು. ಗಂಡು ಹೆಣ್ಣುಗಳ ಮಾನವೀಯ ಸಂಬಂಧಗಳಾಗಬೇಕು. ಆ ಸಂಬಂಧ ಸ್ತ್ರೀಯ ಅಸ್ತಿತ್ವವನ್ನು ಗುರುತಿಸುವಂತಿರಬೇಕು. ಇದು ಮಾನವ ಸಹಜ ಪ್ರೀತಿಯಾಗಬೇಕು. ಇದು ಸ್ತ್ರೀವಾದದ ಬೇಡಿಕೆಯಲ್ಲ, ಬಯಕೆ.

## :: ಗ್ರಂಥ — ಲೇಖನ ಸೂಚಿ ::

1) ಅಕ್ಕ : 1986 : ಸಾಹಿತ್ಯ ಸಿದ್ಧಾಂತ ಮತ್ತು ಹೋರಾಟ (ಮಹಿಳಾ ಸೃಷ್ಟಿ ಮತ್ತು ಕಾವ್ಯ) ಬೆಂಗಳೂರು: ನವಕರ್ನಾಟಕ ಪಬ್ಲಿಕೇಶನ್ಸ್.

2) ಇರಾವತಿ ಕರ್ವೆ : 1990 : ಯುಗಾಂತ, ನವದೆಹಲಿ: ಸಾಹಿತ್ಯ ಅಕಾಡೆಮಿ, (ಅನು: ಸರಸ್ವತಿ ಗಜಾನನ ರಿಸಬೂಡ)

3) ಕಡೆಂಗೋಡ್ಲು ಶಂಕರ ಭಟ್: 1967 : ವಾಙ್ಮಯ ತಪಸ್ಸು (ನಾರಣಪ್ಪನ ಪ್ರತಿಭೆ) ಬೆಂಗಳೂರು: ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ.

4) ಕಮಲಾ ಹಂಪನಾ: 1985 : ಬಾಸಿಂಗ (ಪರಂಪರೆ ಮತ್ತು ಪ್ರತಿಭಟನೆ ಹಾಗೂ ಲೇಖಕಿಯರು) ಧಾರವಾಡ: ಸುಂದರ ಪ್ರಕಾಶನ.

5) ಕೀರ್ತಿನಾಥ ಕುರ್ತಕೋಟಿ: 1989 : 'ಕುಮಾರವ್ಯಾಸ' ನವದೆಹಲಿ: ಸಾಹಿತ್ಯ ಅಕಾಡೆಮಿ.

6

6) ಕುವೆಂಪು: 1979 : ದ್ರೌಪದಿಯ ಶ್ರೀಮುಡಿ, ಮೈಸೂರು: ಉದಯರವಿ ಪ್ರಕಾಶನ.

7) ಕುವೆಂಪು, ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಸಂ) 1988 : ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ, ಮೈಸೂರು: ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ.

8) ಕೇಶವ ಶರ್ಮ : 1992 : 'ಕ್ರಿಯೆ ಪ್ರತಿಕ್ರಿಯೆ' ಬೆಂಗಳೂರು: ಅನ್ವೇಷಣ ಪ್ರಕಾಶನ.

9) ಗಾಯತ್ರಿ ಎನ್ : 1991 : ಮಹಿಳೆ ಬಿಡುಗಡೆಯ ಹಾದಿಯಲ್ಲಿ, ಬೆಂಗಳೂರು: ನವಕರ್ನಾಟಕ ಪಬ್ಲಿಕೇಶನ್ಸ್.

10) ಗಾಯತ್ರೀ ನಾವಡ : 23–5–93 ಉದಯವಾಣಿ ದಿನಪತ್ರಿಕೆ. ಸ್ತ್ರೀವಾದದ ಸಾಂಸ್ಕೃತಿಕ ನೆಲೆಗಳು.

11) ಗುಂಡಪ್ಪ ಎಲ್.: 197[illegible] : ಕುಮಾರವ್ಯಾಸ ಮಹಾಕವಿಯ ಕರ್ಣಾಟಕ ಭಾರತ ಕಥಾಮಂಜರಿ, (ಗದ್ಯಾನುವಾದ) ಬೆಂಗಳೂರು: ಹೇಮಂತ ಸಾಹಿತ್ಯ.

12) ಚಿದಾನಂದಮೂರ್ತಿ ಎಂ.:1984 : ಸಂಶೋಧನೆ, ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು.

13) ಜವರೇ ಗೌಡ ದೇ :1978 : ಗದುಗಿನ ಭಾರತ : ಒಂದು ಸಾಂಸ್ಕೃತಿಕ ಅಧ್ಯಯನ ಧಾರವಾಡ : ಕರ್ನಾಟಕ ವಿಶ್ವವಿದ್ಯಾಲಯ.

14) ದುರ್ಗಾ ಭಾಗವತ(ಅನು:ಗೌರೀಶ ಕೈಕಿಣಿ): 1991 : ವ್ಯಾಸ ಪರ್ವ, ಸುಬ್ರಹ್ಮಣ್ಯ : ಪ್ರಮತಿ ಪ್ರಕಾಶನ ಸಂಸ್ಥೆ ಪುಣೆ : ಮರಾಠಿ–ಕನ್ನಡ ಸ್ನೇಹವರ್ಧನ ಕೇಂದ್ರ.

15) ದೇವೇಂದ್ರ ಕುಮಾರ ಹಕಾರಿ 1977 : ಸಾಹಿತ್ಯ ಸಮುಚ್ಚಯ(ಕುಮಾರವ್ಯಾಸ ಭಾರತದ ಒಂದು ಪ್ರಸಂಗ ಮತ್ತು ಒಂದು ಪ್ರತಿಮೆ) ಧಾರವಾಡ : ಪ್ರಭಾ ಪಬ್ಲಿಷರ್ಸ್.

16) ನರಸಿಂಹಾಚಾರ್ ಡಿ.ಎಲ್.:1971 : ಪೀಠಿಕೆಗಳು ಲೇಖನಗಳು (ಕುಮಾರವ್ಯಾಸನ ದೃಷ್ಟಿಯಲ್ಲಿ ಕರ್ಣ) ಮೈಸೂರು :ಡಿ.ವಿ.ಕೆ. ಮೂರ್ತಿ.

17) ನಿರುಪಮಾ(ಸಂ):1979 : 'ಮಹಾಭಾರತದಲ್ಲಿ ಮಹಿಳಾ ಪಾತ್ರಗಳು' ಬೆಂಗಳೂರು; ಮಿಥಿಕ್ ಸೊಸೈಟಿ.

18) ಪಂಡಿತ ಪಂಡರಿನಾಥಾಚಾರ್ಯ ಗಲಗಲಿ 1969 : ಮಹಾಭಾರತದ ಮಹಿಳೆಯರು, ಧಾರವಾಡ; ಮಿಂಚಿನ ಬಳ್ಳಿ ಕಾರ್ಯಾಲಯ.

19) ಪ್ರಭಾವತಿ ಎಸ್.ವಿ.:1992 : ಕನ್ನಡ ಸಾಹಿತ್ಯದಲ್ಲಿ ದ್ರೌಪದಿ, ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು.

20) ಪುಟ್ಟಯ್ಯ ಕೆ.:1984 : ಹಳೆಗನ್ನಡ ಕಾವ್ಯಗಳಲ್ಲಿ ಶೃಂಗಾರ ನಿರೂಪಣೆ ಎಂ.ಫಿಲ್ ಪದವಿಗಾಗಿ ಬೆಂಗಳೂರು ವಿ ವಿ.ಗೆ ಸಲ್ಲಿಸಿದ ಪ್ರಬಂಧ(ಅಪ್ರಕಟಿತ)

21) ಪೂಜಾರ ವಿ.ಜಿ.:1987 : ಸಾಹಿತ್ಯ ಸಮಾವೇಶ (ಕುಮಾರವ್ಯಾಸನ ವಿಚಾರಗಳು ಒಂದು ಟಿಪ್ಪಣಿ) ಕಲಬುರ್ಗಿ: ಪುಸ್ತಕ ಅಕಾಡೆಮಿ.

22) ಬರಗೂರು ರಾಮಚಂದ್ರಪ್ಪ (ಸಂ) 1993 : ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ: ಬೆಂಗಳೂರು : ಕರ್ನಾಟಕ ಸಾಹಿತ್ಯ ಅಕಾಡೆಮಿ.

23) ಬರಗೂರು ರಾಮಚಂದ್ರಪ್ಪ (ಸಂ):1993 : ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ : ಬೆಂಗಳೂರು: ಕನ್ನಡ ಸಾಹಿತ್ಯ ಅಕಾಡೆಮಿ.

24) ಬರಗೂರು ರಾಮಚಂದ್ರಪ್ಪ 1989 : ಸಂಸ್ಕೃತಿ ಮತ್ತು ಸೃಜನಶೀಲತೆ:(ಸ್ತ್ರೀ ಸ್ವಾತಂತ್ರ್ಯ) ಬೆಂಗಳೂರು: ಸಂವಾದ ಪ್ರಕಾಶನ.

25) ಬರಗೂರು ರಾಮಚಂದ್ರಪ್ಪ (ಸಂ) 1993 : ವಚನ ಸಾಹಿತ್ಯದಲ್ಲಿ ಕೆಳವರ್ಗದ ಆಶಯ ಮತ್ತು ಅಭಿವ್ಯಕ್ತಿ, ಬೆಂಗಳೂರು: ಕರ್ನಾಟಕ ಸಾಹಿತ್ಯ ಅಕಾಡೆಮಿ.



26) ಬಸವರಾಜ ಕಲ್ಗುಡಿ:1988 : ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು.

27) ಬಸವರಾಜ ಸಬರದ: 1990 : ಹೊಸದಿಕ್ಕು (ಕನ್ನಡ ಸಾಹಿತ್ಯ ಮತ್ತು ಮಹಿಳಾ ಸಂವೇದನೆಗಳು) ಬೀದರ : ಪಲ್ಲವಿ ಪ್ರಕಾಶನ.

28) ಬಸವಾರಾಧ್ಯ ಎನ್.(ಸಂ):1992 : ಕನ್ನಡ ಗದ್ಯಾವಲೋಕನ: (ಕುಮಾರವ್ಯಾಸನ ದೃಷ್ಟಿಯಲ್ಲಿ ಕರ್ಣ) ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು.

29) ಬೆಟಗೇರಿ.ವೈ.ವೈ.:1989 : ಕುಮಾರವ್ಯಾಸನ ಕರ್ಣ ಸಾಂಸ್ಕೃತಿಕ ಅಧ್ಯಯನ ಗದಗ: ಜೆ.ಬಿ.ಪಬ್ಲಿಕೇಶನ್ಸ್.

30) ಭೈರವಮೂರ್ತಿ.ಕೆ :1973 : ಪ್ರತಿಫಲನ : (ಕುಮಾರವ್ಯಾಸ ಭಾರತದಲ್ಲಿ ದ್ರೌಪದಿ ಸ್ವಯಂವರ) ಮೈಸೂರು : ವಿಜಯ ಪ್ರಕಾಶನ.

31) ಮಂಗಳಾ ಟಿ.ನ: 1994 : ಮಹಿಳಾ ಸಾಹಿತ್ಯ, ಬೆಂಗಳೂರು; ಶಾಶ್ವತಿ ಪ್ರಕಾಶನ.

32) ಮಲ್ಲೇಪುರಂ.ಜಿ ವೆಂಕಟೇಶ (ಸಂ) 1990 : ಕರ್ಣ ಒಂದು ಅಧ್ಯಯನ. (ಕುಮಾರವ್ಯಾಸನ ಕರ್ಣ : ಶಂಭಾ ಜೋಶಿ) ಬೆಂಗಳೂರು : ಸಂಸ್ಕೃತಿ ವಿಕಾಸ ಮಾಲೆ.

33) ಮಾಸ್ತಿ ವೆಂಕಟೇಶ ಅಯ್ಯಂಗಾರ : 1965 : ಪ್ರಸಂಗ-2 (ಕುಮಾರವ್ಯಾಸ) ಮೈಸೂರು: ಉಷಾ ಪ್ರೆಸ್.

34) ಮಾಳವಾಡ.ಸ.ಸ.:1971 : ಸಾಹಿತ್ಯ ಸಂಗಮ (ಕುಮಾರವ್ಯಾಸ) ಧಾರವಾಡ : ಜಯ ಪ್ರಕಾಶನ.

35) ಮುಗಳಿ ರಂ.ಶ್ರೀ.:1970 : ವಿಮರ್ಶೆಯ ವ್ರತ (ಕುಮಾರವ್ಯಾಸ ಭಾರತದ ಹಿರಿಮೆ) ಮೈಸೂರು : ಉಷಾ ಪ್ರೆಸ್.

36) ರಂಗಣ್ಣ ಎಸ್.ವಿ.:1981 : ಕುಮಾರವ್ಯಾಸ ವಾಣಿ, ಮೈಸೂರು. ಪ್ರಸಾರಾಂಗ : ಮೈಸೂರು ವಿಶ್ವವಿದ್ಯಾಲಯ.

37) ರಾಘವೇಂದ್ರರಾವ್.ಎಚ್.ಎಸ್. 1981 : ವಿಶ್ಲೇಷಣೆ (ಕುಮಾರವ್ಯಾಸನ ಇತರ ಪಾತ್ರಗಳು) ಬೆಂಗಳೂರು: ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್.

38) ರಾಜೇಗೌಡ.ಹ.ಕ.(ಸಂ):1973 : ಇಷು ಸಂಚಯ (ಕುಮಾರವ್ಯಾಸ :ಜಿ.ವಿ.ಡಿ.) ಮಂಡ್ಯ : ಕನ್ನಡ ಸಾಹಿತ್ಯ ಪರಿಷತ್ತು.

39) ರಾಜೇಂದ್ರ ಚೆನ್ನಿ(ಸಂ):1989 : ಸಾಹಿತ್ಯ ವಿಮರ್ಶೆ –1988, (ಕನ್ನಡ ಮಹಿಳಾ ಸಾಹಿತ್ಯ ಮತ್ತು ಸ್ತ್ರೀತ್ವದ ಶೋಧನೆ: ಬಿ.ಎನ್.ಸುಮಿತ್ರಾಬಾಯಿ) ಬೆಂಗಳೂರು; ಕರ್ನಾಟಕ ಸಾಹಿತ್ಯ ಅಕಾಡೆಮಿ.

40) ಲಠ್ಠೆ ಎಂ.ಎಸ್.:1977 : ಸಾಹಿತ್ಯ ಸಂತುಷ್ಟಿ (ಕುಮಾರವ್ಯಾಸನ ಭೀಷ್ಮ ಪರ್ವ) ಮುತನಾಳ : ಮಲ್ಲ ಸರ್ಜ ಪ್ರಕಾಶನ.

41) ಲಕ್ಷ್ಮಣ ತೆಲಗಾವಿ(ಸಂ):1991 : ಸಂಶೋಧನ (ಮೂರು ಭಾರತದಲ್ಲಿ ಪಾಂಡು ಮಾದ್ರಿ ಪ್ರಸಂಗ : ಸಿ.ಪಿ.ಕೆ) ಬೆಂಗಳೂರು: ಡಾ.ಎಂ.ಚಿದಾನಂದಮೂರ್ತಿ ಅಭಿನಂದನಾ ಸಮಿತಿ.

42) ಲಕ್ಷ್ಮೀನಾರಾಯಣ ಭಟ್ಟ.ಎನ್.ಎಸ್. 1978 : 'ವಿವೇಚನ' (ಕುಮಾರವ್ಯಾಸ ಭಾರತದಲ್ಲಿ ಅಕ್ಷಯ ವಸ್ತ್ರ ಪ್ರಸಂಗ) ಮೈಸೂರು: ಅಪರ್ಣ ಪ್ರಕಾಶನ.

43) ಲಿಂಗಯ್ಯ.ಡಿ.:1989 : ಕಾವ್ಯಾಸ್ವಾದನ (ಕುಮಾರವ್ಯಾಸ ಕಂಡರಿಸಿದ ಅತಿಮಾನುಷ ವ್ಯಕ್ತಿತ್ವ) ಬೆಂಗಳೂರು: ದಿನಕರ ಪ್ರಕಾಶನ.

44) ವಿಜಯಶ್ರೀ ಸಬರದ:1989 : ಸಾಹಿತ್ಯ ಮತ್ತು ಮಹಿಳೆ, ಬೆಂಗಳೂರು: ನವಕರ್ನಾಟಕ ಪ್ರಕಾಶನ.

45) ವಿಜಯಾ ದಬ್ಬೆ :1989 : ಮಹಿಳೆ — ಸಾಹಿತ್ಯ — ಸಮಾಜ ಮೈಸೂರು : ರಚನಾ ಪ್ರಕಾಶನ.

46) ವೆಂಕಟಲಕ್ಷ್ಮಿ ಬಿ.ಎಸ್.:1991 : ಕನ್ನಡ ಲೇಖಕಿಯರ ನೆಲೆ — ಬೆಲೆ, ಬೆಂಗಳೂರು : ಎಸ್.ಟಿ.ಶ್ಯಾಂ. ಪ್ರಕಾಶನ.

47) ವೀಣಾ ಶಾಂತೇಶ್ವರ(ಸಂ):1990 : ಮಹಿಳಾ ಅಧ್ಯಯನ, ಧಾರವಾಡ: ಪ್ರೊ.ಎಚ್.ವಿ.ನಾಗೇಶ್, ಸನ್ಮಾನ ಸಮಿತಿ.

48) ವೀರಣ್ಣ ಸಿ.:1990 : ಕನ್ನಡ ಸಾಹಿತ್ಯ ಮತ್ತು [illegible] ಪಿ.ಎಚ್.ಡಿ ಪದವಿಗಾಗಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಬಂಧ(ಅಪ್ರಕಟಿತ).

49) ಶಿವರುದ್ರಪ್ಪ.ಜಿ.ಎಸ್.(ಸಂ)1990 : ಕನ್ನಡ ಸಾಹಿತ್ಯ ಸಂದರ್ಭ, ಬೆಂಗಳೂರು ಕರ್ನಾಟಕ ಸಾಹಿತ್ಯ ಅಕಾಡೆಮಿ.

50) ಶಿವರುದ್ರಪ್ಪ.ಜಿ.ಎಸ್.:1982 : ಪರಿಶೀಲನ (ಕುಮಾರವ್ಯಾಸನ ಅಕ್ಷಯ ವಸ್ತ್ರ ಪ್ರಸಂಗ) ಬೆಂಗಳೂರು :ಶಾರದಾ ಪ್ರಕಾಶನ.

51) ಶಿವರುದ್ರಪ್ಪ.ಜಿ.ಎಸ್.(ಸಂ)1977 : ವಿಚಾರ ಸಾಹಿತ್ಯ—1, (ಹೆಣ್ಣಿನ ಸ್ಥಾನಮಾನ: ಶರಚ್ಚಂದ್ರ ಚಟ್ಟೋಪಾಧ್ಯಾಯ)ಬೆಂಗಳೂರು: ಪ್ರಸಾರಂಗ, ಬೆಂಗಳೂರು ವಿಶ್ವವಿದ್ಯಾಲಯ.

52) ಶ್ರೀನಿವಾಸ ದೇಶಪಾಂಡೆ:1979 : ವಿದ್ಯಾರ್ಥಿಭಾರತಿ (ಕುಮಾರವ್ಯಾಸನ ಮೂರು ಪದ್ಯಗಳು) ಧಾರವಾಡ : ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ.

53) ಶ್ರೀನಿವಾಸಮೂರ್ತಿ: 1989 : ಸಹ ಚಿಂತನ (ಕುಮಾರವ್ಯಾಸನ ಎರಡು ಪ್ರಸಂಗಗಳು: ಒಂದು ಟಿಪ್ಪಣಿ) ಬೆಂಗಳೂರು: ಜಿ.ಕಲ್ಲಯ್ಯ ಎಂಡ್ ಸನ್ಸ್.

54) ಶ್ರೀನಿವಾಸಮೂರ್ತಿ ಕೆ.ವಿ.:1991: ಕುಮಾರವ್ಯಾಸ ಮತ್ತು ಕರ್ನಾಟಕ ಭಾರತ ಕಥಾ ಮಂಜರಿ : ಒಂದು ವಿಮರ್ಶಾತ್ಮಕ ಅಧ್ಯಯನ, ಪಿ.ಎಚ್.ಡಿ ಪದವಿಗಾಗಿ, ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಬಂಧ(ಅಪ್ರಕಟಿತ).

55) ಸವಿತಾ ನಾಗಭೂಷಣ(ಸಂ):1992 : ಸೆಪ್ಟೆಂಬರ್ ಡಿಸೆಂಬರ್, ಸಂವಾದ (ಮಹಿಳಾ ಸಾಹಿತ್ಯ ವಿಶೇಷಾಂಕ) ಮಲ್ಲಾಡಿಹಳ್ಳಿ : ಸಂವಾದ ಪ್ರಕಾಶನ.

56) ಸಿ.ಪಿ.ಕೆ : 1986 : ಸಭಾಪರ್ವ ಸಂಕಲನ, ಮೈಸೂರು : ಚಿತ್ರಭಾನು ಪ್ರಕಾಶನ.

57) ಸಿ.ಪಿ.ಕೆ.:1965 : ಕನ್ನಡ ಚತುರ್ಮುಖ (ಕುಮಾರವ್ಯಾಸನಲ್ಲಿ ಪ್ರಕೃತಿ) ಮೈಸೂರು: ಸುರುಚಿ ಪ್ರಕಾಶನ.

58) ಸುಜನಾ : 1985 : ಹೃದಯ ಸಂವಾದ (ಕುಮಾರವ್ಯಾಸನ ಅರ್ಜುನ ಊರ್ವಶಿ ಪ್ರಸಂಗ) ಬೆಂಗಳೂರು : ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

59) ಹೆಗಡೆ.ಎಲ್.ಆರ್.:1978 : ಕುಮಾರವ್ಯಾಸನ ಪಾತ್ರ ಸೃಷ್ಟಿ, ಧಾರವಾಡ; ಕರ್ನಾಟಕ ವಿಶ್ವವಿದ್ಯಾಲಯ.

60) ಹೇಮಾ ಪಟ್ಟಣಶೆಟ್ಟಿ: 1992 : ಮರ್ಯಾದೆಯ ಮುಸುಕಿನಲ್ಲಿ (ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣು) ಧಾರವಾಡ : ಅನನ್ಯ ಪ್ರಕಾಶನ.

61) : 1978 ಕುಮಾರವ್ಯಾಸ ಪ್ರಶಸ್ತಿ, ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು.


o o o o

